ಪ್ರಥಮ ಕೌಸ್ತುಭ:

# ಶಾಪ

[ ಪ್ರಸಾರ ತಥಾ ದೃಶ್ಯ ನಾಟಕ ]




●

ರತ್ನಾ ಶಾಸ್ತ್ರಿ

●

೧೯೫೮

ಕೌಸ್ತುಭ ಪ್ರಕಾಶನ,
ಬೆಳಗಾವಿ.

## — ಪ್ರಮುಖ ವ್ಯಾಪಾರಿಗಳು —

★ ಕನ್ನಡ ಪುಸ್ತಕಾಲಯ, **ಬೆಳಗಾವಿ.**

★ ಹರಿಹರ ಪುಸ್ತಕಾಲಯ, **ಹರಿಹರ**

★ ಮನೋಹರ ಗ್ರಂಥ ಭಾಂಡಾರ **ಧಾರವಾಡ**

★ ದಿ ಅಜಿತ ಎಜನ್ಸಿ **ಬೆಳಗಾವಿ**

**ಮೊದಲನೇಯ ಮುದ್ರಣ**
೧,೦೦೦ ಪ್ರತಿಗಳು.
ಮೇ, ೧೯೫೮





ಪ್ರಕಾಶಕರು:
**ಶಾಸ್ತ್ರಿ ಶಿವರಾಯ,**
**ನವಲಗುಂದ**
೧೪೭೩, ದೇಶಪಾಂಡೆ ಬೀದಿ
ಬೆಳಗಾವಿ

ಮುದ್ರಕರು:
**ವ್ಹಿ. ವಾಯ್. ಪಾಟೀಲ,**
ವೀರ **ಭಾರತ** ಮುದ್ರಣಾಲಯ
ಬೆಳಗಾವಿ

ನಮ್ಮ ಮನೆತನದಲ್ಲಿಯ
ಕಹಿಯನ್ನೆಲ್ಲ ಉಂಡು, ಸಿಹಿಯನ್ನು
ಮಾತ್ರ ನಮ್ಮ ಪಾಲಿಗೆ ಬಿಟ್ಟುಹೋದ
ನನ್ನ ತಾಯಿ

**ಸಾವಿತ್ರಮ್ಮನಿಗೆ—**

ನನ್ನೀ ಪ್ರಥಮಕೃತಿ ಮುಡುಪಾಗಿರಲಿ-

—**ರತ್ನಾ**

# ಶಾಪ

[ ಪೌರಾಣಿಕ ರೂಪಕ ]

## ಪಾತ್ರಗಳು

| | |
|---|---|
| **ಶುಕ್ರಾಚಾರ್ಯ** | ದೈತ್ಯ ಕುಲಗುರು. |
| **ದೇವಯಾನಿ** | ಶುಕ್ರಾಚಾರ್ಯರ ಮಗಳು |
| **ವೃಷಪರ್ವ** | ದೈತ್ಯರಾಜ |
| **ಸೇನಾಪತಿ** | ದೈತ್ಯ ಸೇನಾಪತಿ |
| **ಯುವರಾಜ** | ದೈತ್ಯ ರಾಜನ ಮಗ |
| **ಕಚ** | ದೇವಗುರು ಬೃಹಸ್ಪತಿಯ ಮಗ |

## ಗೌಣ ಪಾತ್ರಗಳು

**ಸೈನಿಕರು, ದಾಸಿಯರು**

## ಧ್ವನಿ ಸೂಚನೆಗಳು

ಮೇಘ ಗರ್ಜನೆ

ಸಿತಾರ

ಜಾಂಗಟೆ ಧ್ವನಿ

ಪ್ರಾಸಂಗಿಕ ಧ್ವನಿ ನಿನಾದಗಳು

---

# ಶಾಪ

(ಪ್ರಸಾರ ತಥಾ ದೃಶ್ಯ ನಾಟಕ)

**ನಿವೇದಕ:**

ದೇವಗುರುವಾದ ಬೃಹಸ್ಪತಿಯು ಇಂದ್ರನ ಹೇಳಿಕೆಯ ಮೇರೆಗೆ ತನ್ನ ಮಗನಾದ ಕಚನನ್ನು, ದೈತ್ಯ ಗುರುವಾದ ಶುಕ್ರಾಚಾರ್ಯನ ಬಳಿಯಲ್ಲಿದ್ದ ಸಂಜೀವಿನಿ ವಿದ್ಯೆಯನ್ನು ಹರಣಮಾಡಿ ತರುವುದಕ್ಕೆ ಕಳಿಸುವನು. ದೈತ್ಯಾಭಿಮಾನಿಯಾದ ಶುಕ್ರಾಚಾರ್ಯನು ತನ್ನ ಮಗಳಾದ ದೇವಯಾನಿಯನ್ನು ಮತ್ತು ಸಂಜೀವಿನಿವಿದ್ಯೆಯನ್ನು ತಮ್ಮ ಸಂಪ್ರದಾಯಿಗಳಿಗೇ ಕೊಡುವುದನ್ನು ನಿರ್ಧರಿಸಿರುವನು. ಆದರೆ ಕಚನ ಪ್ರೇಮಪಾಶದಲ್ಲಿ ದೇವಯಾನಿಯು ಸಿಗುವಳು. ಶುಕ್ರಾಚಾರ್ಯರಿಗೆ ಮತ್ತು ಅವರ ಅನುಯಾಯಿಗಳಿಗೆ ಇದು ಸೇರುವದಿಲ್ಲ. ಅವರು ಕಚನನ್ನು ಕೊಂದು ಹಾಕುವರು. ದೇವಯಾನಿಯ ಸಲುವಾಗಿ ಶುಕ್ರಾಚಾರ್ಯರಿಗೆ ಕಚನನ್ನು ಹಲವು ಸಾರೆ ಜೀವಂತಮಾಡುವ ಪ್ರಸಂಗಬರುವದು. ಕೊನೆಗೆ ಯುವರಾಜ ಮತ್ತು ಇನ್ನಿತರರು ಕೂಡಿ ಕಚನನ್ನು ಕೊಂದು ಸುಟ್ಟು ಅವನ ಬೂದಿಯನ್ನು ಶುಕ್ರಾಚಾರ್ಯರು ಸೇವಿಸುವ ಮದ್ಯದಲ್ಲಿ ಕೂಡಿಸುವರು. ಕಚನು ಕಾಣದ್ದರಿಂದ ದೇವಯಾನಿಯು, ಮದ್ಯವನ್ನು ಕುಡಿದು ಮತ್ತರಾಗಿ ಕುಳಿತ ಶುಕ್ರಾಚಾರ್ಯರ ಬಳಿಯಲ್ಲಿ ಬಂದು, ಅವರನ್ನು ಮದ್ಯದ ಸಮಾಧಿಯಿಂದ ಎಚ್ಚರಗೊಳಿಸುತ್ತಿದ್ದಾಳೆ.

**ದೇವಯಾನಿ**

-ಅಪ್ಪಾಜಿ ...ಅಪ್ಪಾಜಿ ...! ಎಚ್ಚರಾಗಿರಿ ಎಚ್ಚರಾಗಿರಲ್ಲ .. ! ಇಂದು ಇಷ್ಟೇಕೆ ಧ್ಯಾನಸ್ಥರಾಗಿ ಕುಳಿತುಕೊಂಡಿರುವಿರಿ? ಸಮಾಧಿಯನ್ನು ಇಳಿಸುವ ಸಮಯವು ಗತಿಸಿ ಹೋದರೂ ಇಂದು... ಧ್ಯಾನಸ್ಥರೇಕೆ? ಸಮಾಧಿಯನ್ನು ಇಳಿಸಿರಿ! ಮತ್ತು ನನ್ನ ಕಚನೆಲ್ಲಿದ್ದಾನೆಂಬುದನ್ನು ಹೇಳಿರಿ. ನಿಮ್ಮ ದಿವ್ಯ ದೃಷ್ಟಿಗೆ ಇದು....ಹೇಗೆ ಗೋಚರವಾಗುವದಿಲ್ಲ? ಯುವರಾಜನು ಒಮ್ಮೆ ಕಚನನ್ನು ಕೊಂದಿದ್ದ.. ! ತಿರುಗಿ ಆತನೇ ನನ್ನ ಕಚನನ್ನು ಕೊಂದಿರಬಹುದೇ?....ನೀವಿಂದು ಮೌನವನ್ನೇಕೆ ಧಾರಣಮಾಡಿರುವಿರಿ? ಯುವರಾಜ... ನನ್ನ ಕಚ....ಎಲ್ಲಿಗೆ ಹೋಗಿದ್ದಾನೆಂಬುದು ನಿಮಗೆ ಗೊತ್ತಿದೆಯೆ?

**ಯುವರಾಜ**

—ಗುರುಕನ್ಯೆ, ನಾವು ಅವನನ್ನು ಎರಡು ದಿನಗಳಿಂದ ನೋಡಿಯೇ ಇಲ್ಲ!

**ದೇವಯಾನಿ**

—(ಕ್ರೋಧದಿಂದ) ಸುಳ್ಳು....! ನೀವು ಅರಿತಿರಲೇ ಬೇಕು...! ಹೇಳಿರಿ ಯುವರಾಜ, ಎಲ್ಲಿದ್ದಾನೆ....ನನ್ನ ಕಚ? ನಿಮಗೆ ನಿಮ್ಮ ಗುರುವಿನ ಆಣೆಯಿದೆ!

**ಯುವರಾಜ**

—ದೇವಿ, ನಿಜವಾಗಿಯೂ ನಾವು ಅರಿಯೆವು.

**ದೇವಯಾನಿ**

—ಏನು .. ನಿಮಗೆ ಗೊತ್ತಿಲ್ಲವೆ?

**ಯುವರಾಜ**

—ಇಲ್ಲ ದೇವಿ....

**ದೇವಯಾನಿ**

—ಗೊತ್ತಿಲ್ಲದಿದ್ದರೆ ನಾಲ್ಕೂ ದಿಕ್ಕಿಗೆ ಜನರನ್ನು ಕಳಿಸಿರಿ. ಆದಷ್ಟು ಬೇಗ ಗೊತ್ತು ಹಚ್ಚಿರಿ. ಇಲ್ಲಿ....ಒಂದು ಕ್ಷಣ ಕೂಡ ನಿಲ್ಲಬೇಡಿರಿ....! (ಯುವರಾಜನು ಹೋಗುವನು) ಅಪ್ಪಾಜಿ... ಸಮಾಧಿಯನ್ನು ಇಳಿಸಿರಿ ...! ನಡೆದು ಹೋದ ಅನಾಹುತ ವನ್ನೊಮ್ಮೆ ಕಣ್ತೆರೆ ನೋಡಿರಿ! ಎಲ್ಲರೂ ಕೂಡಿ ಪುನಃ ನನ್ನ ಕಚನನ್ನು ಕೊಂದು....ಎಲ್ಲಿಯೋ ಮುಚ್ಚಿಟ್ಟಿದ್ದಾರೆ. ಸಮಾಧಿಯನ್ನಿಳಿಸಿ, ಕಚನನ್ನು ಹುಡುಕಿ ತರುವದಕ್ಕಾಗಿ.... ವೃಷಪರ್ವ ರಾಜನಿಗ ಆಜ್ಞೆಮಾಡಿರಿ! ಒಂದು ವೇಳೆ ತಂದು ಕೊಡದಿದ್ದರೆ ನಿಮ್ಮ ತಪಃಪ್ರಭಾವದಿಂದ ಅಗ್ನಿಯನ್ನು ನಿರ್ಮಾಣಮಾಡಿ.... ಆತನ ಎಲ್ಲ ವಂಶವನ್ನು ಆತನ ಪರಿ ವಾರ ಸಂಪತ್ತಿನೊಂದಿಗೆ ನನ್ನ ಕಣ್ಣೆದುರಿನಲ್ಲಿ ಸುಟ್ಟು ಹಾಳು ಮಾಡಿರಿ.

**ಶುಕ್ರಾಚಾರ್ಯ**

—(ಕಣ್ತೆರೆದು ಗಂಭೀರವಾಗಿ) ಕಂದಾ....ದೇವಯಾನಿ....!

**ದೇವಯಾನಿ**

—ಅಹ್ಹಾಂ... ನಿದಾನವಾಗಿ ಎಚ್ಚರಾಗಿರಿ. ನಡೆದುದೆಲ್ಲವನ್ನು ನಿಮ್ಮ ದಿವ್ಯ ದೃಷ್ಟಿಯಿಂದೊಮ್ಮೆ ನೋಡಿರಿ!

**ಶುಕ್ರಾಚಾರ್ಯ**

—(ಸುತ್ತಲೂ ನೋಡಿ ಅಂಜುತ್ತ) ಘಾತ...! ಘಾತ...! ಸರ್ವಸ್ವದ ಘಾತವಾಯಿತು! ಹೇಗಾಯಿತಿದು? ಏನಾಯಿತು ನನ್ನ ಪರಿಸ್ಥಿತಿ?

**ದೇವಯಾನಿ**

—ಏನಾಯಿತು ಅಪ್ಪಾಜಿ? ಹೇಳಿರಲ್ಲ....ಏನಾಯಿತು? ನೀವು

ಇಷ್ಟೊಂದು ಅಂಜಿರುವಿರೇಕೆ? ನಿಮ್ಮ ಶರೀರ ಕಂಪಿಸುತ್ತಿರುವದೇಕೆ? ಇದೇನು... ಮೈಯೆಲ್ಲ....ಜೋರನೆ ಬೆವತಿರುವದಲ್ಲ? ಏನಾಯಿತು ಅಪ್ಪಾಜಿ... ?

**ಶುಕ್ರಾಚಾರ್ಯ**

—ಕಂದಾ... ಆಗಬಾರದ್ದೇ ಆಗಿಹೋಯಿತು!

**ದೇವಯಾನಿ**

—ಅಂದರೆ....ಏನಾಯಿತು?

**ಶುಕ್ರಾಚಾರ್ಯ**

—ದೇವಯಾನಿ, ಸಂಜೀವಿನಿ ವಿದ್ಯೆಯ ಆಧಾರದ ಮೇಲಿಂದ ಎಲ್ಲ ದೇವತೆಗಳ ಜೊತೆಯಲ್ಲಿ ದೇವೇಂದ್ರನನ್ನು ಕೂಡ ಲೆಕ್ಕಿಸದಂಥ ಮತ್ತು ಆತನನ್ನು ಮಣ್ಣುಪಾಲುಮಾಡಲು ನಿಶ್ಚಯಿಸಿದಂಥ ಈ ಶುಕ್ರಾಚಾರ್ಯನು ಇಂದು ಸ್ವತಃ ಮಣ್ಣುಪಾಲಾದನು. ಮಾಡಿದ ತಪಶ್ಚರ್ಯದ ಫಲವು ಇಂದು ವಿಫಲವಾಯಿತು. ಎಲ್ಲರೂ ನನ್ನ ಕೃತಿಯನ್ನು ಕಂಡು ಹಾಸ್ಯ ಮಾಡುವ ಸಂದರ್ಭ ಬಂದೊದಗಿತು! ನಿನ್ನ ತಂದೆಯು ಇಂದು ಜೀವದಿಂದಿದ್ದರೂ ಸತ್ತಂತೆಯೆ! ನಿಜವಾಗಿಯೂ ಜೀವನ್ಮೃತ!

**ದೇವಯಾನಿ**

—ಇದೇನು ನಿಮ್ಮ ಕಣ್ಣುಗಳಲ್ಲಿ ನೀರೇಕೆ? ನಿಮಗೆ ಆಗಿರುವದಾದರೂ ಏನು? ಮಾತಾಡಿರಲ್ಲ....

**ಶುಕ್ರಾಚಾರ್ಯ**

—(ತಿರಸ್ಕಾರಪೂರಿತ ಮೆಲುನಗೆ ನಕ್ಕು) ಆಗಿರುವದಾದರೂ ಏನು? ಈ ಅಭಿಮಾನಿಯಾದ ಶುಕ್ರಾಚಾರ್ಯನ ಮುಖಕ್ಕೆ ಕಪ್ಪು ಹತ್ತುವ ಸಂಗತಿಯೆ ಆಗಿಹೋಯಿತು.

ದೇವಯಾನಿ

—ಅಂದರೆ... ನನ್ನ ಕಚನು ಜೀವದಿಂದಿರುವನಲ್ಲವೆ? ಇರದಿದ್ದರೆ ಜೀವಂತನಾಗಬಹುದಲ್ಲವೆ?

ಶುಕ್ರಾಚಾರ್ಯ

—ಯಾವ ಮುಖದಿಂದ ನಿನ್ನ ಕಚನ ವಾರ್ತೆಯನ್ನು ನಿನಗೆ ಹೇಳಲಿ?

ದೇವಯಾನಿ

—(ಅಂಜಿಕೆಯಿಂದ ಒಮ್ಮೆಲೆ ಕಿರುಚಿಕೊಂಡು) ಅಪ್ಪಾಜಿ, ನನ್ನ.... ನನ್ನ ಕಚನು.... ಜೀವದಿಂದಿರುವನಲ್ಲವೆ?

ಶುಕ್ರಾಚಾರ್ಯ

— ದೇವಯಾನಿ.... ಇರದಿದ್ದರೂ ನನಗೆ ಆತನನ್ನು ಜೀವಂತ ಮಾಡುವದು ಕ್ರಮಪ್ರಾಪ್ತವಾಗಿರುವದು ಆದರೆ... ಆದರೆ .. ಯಾವುದನ್ನು ಈ ಜನ್ಮದಲ್ಲಿ.... ನಾನು ಮಾಡಬಾರದೆಂದು ನಿಶ್ಚಯಿಸಿದ್ದೆನೋ ಅದನ್ನೆ ಮಾಡುವ ಸರತಿಯು ಕೊನೆಗೆ ಬಂದಿತು. (ಕೋಪದಿಂದ) ಕುಟಿಲ ಕಾರಸ್ಥಾನಗಳನ್ನು ರಚಿಸಿದ ದೇವೇಂದ್ರನೆ ಕೊನೆಗೆ ವಿಜಯಿಯಾದನು. ನನ್ನ ಮನಸ್ಸಿನ ವಿರುದ್ಧವಾಗಿ.... ನನ್ನ ಅನುಯಾಯಿಗಳ ಮನಸ್ಸಿನ ವಿರುದ್ಧವಾಗಿ ಕಚನು ನನ್ನಿಂದ ಸಂಜೀವಿನಿ ವಿದ್ಯೆಯನ್ನು ಸಂಪಾದಿಸದೆ ಬಿಡನು! ಎಲೈ ಇಂದ್ರನೆ, ನಗುವಿಯಾ? ನಗು ನಗು....! ನಿನ್ನ ಮನಸ್ಸಿಗೆ ತೃಪ್ತಿಯಾಗುವಷ್ಟು ನಗು! ನೀನು ಯಶಪಡೆದೆಯಲ್ಲವೆ? ನನ್ನ ಪರಾಭವವಾಯಿತು. (ರೋಷದ ಉದ್ವೇಗದಿಂದ) ಪಂಚಮಹಾಭೂತಗಳೇ ನೋಡಿರಿ ...ಎಂಟು ದಿಕ್ಪಾಲಕರೆ ನೋಡಿರಿ... ದೇವತೆಗಳ ಸಮೂಹವೇ ನೋಡಿರಿ.... ದೇವೇಂದ್ರನು ಕಪಟತನದಿಂದ ಈ ಸಂಜೀವಿನಿ ವಿದ್ಯೆಯನ್ನು ನನ್ನಿಂದ ಹರಣಮಾಡಿದ್ದಾನೆ.

**ದೇವಯಾನಿ**

—ಅಪ್ಪಾಜಿ, ಏನಾಯಿತೆಂಬುದನ್ನು ಸ್ಪಷ್ಟವಾಗಿ ಹೇಳಿರಿ!

**ಶುಕ್ರಾಚಾರ್ಯ**

—ಏನಾಯಿತೆಂದು ನನಗೇ ಕೇಳು! ನಿನ್ನ ತಂದೆಯು ನಾಲ್ಕು ಜನರಿಗೆ ಮುಖವನ್ನು ತೋರಿಸದ ಸಂದರ್ಭ ಬಂದೊದಗಿತು. ಶುಕ್ರಾಚಾರ್ಯನ ಹೆಸರನ್ನು ತೆಗೆದುಕೊಂಡ ಮಾತ್ರಕ್ಕೆ ನೂರೂ ಲೋಕಗಳು ನಡುಗುತ್ತಿದ್ದವು ಆದರೆ ಅವೇ ಈಗ ಗಹಗಹಿಸಿ ನಗುತ್ತಲಿವೆ. ಇದೇನು ಕಡಿಮೆ ಅಪಮಾನವೆ? ಇದುವರೆಗೆ ಈ ಶರೀರವನ್ನು ಎಲುವಿನ ಹಂದರ ಮಾಡಿ, ಮಾಡಿದ ತಪಶ್ಚರ್ಯವ ಫಲವು ಇಂದು ನಾಶವಾಯಿತು! ಸಂಪಾದಿಸಿದ... ಪುಣ್ಯದ ಮೇಲೆ... ನೀರು ಬಿಡ ಬೇಕಾಗಿ ಬಂದಿತು. ವಿಧಾತನು ನನ್ನ ಹಣೆಬರಹದಲ್ಲಿ ಏನೇನು ಬರೆದಿರುವನೋ ಯಾರಿಗೆ ಗೊತ್ತು? ಇದು ನನಗೆ ತಿಳಿಯದಂತಾಗಿರುವದು. (ರೋಷದಿಂದ) ಇದಕ್ಕೆಲ್ಲ ನಿನ್ನ ಕಚನೇ ಕಾರಣ....!

**ದೇವಯಾನಿ**

—(ಆಶ್ಚರ್ಯದಿಂದ) ನನ್ನ ಕಚ? ಅದು ಹೇಗೆ?

**ಶುಕ್ರಾಚಾರ್ಯ**

—ಅದು ಹೇಗೆ? ಈ ಪರಾಭವ, ಅಪಮಾನ ಮತ್ತು ದುರ ವಸ್ಥೆಗೆ ಕಚನೇ ಕಾರಣನಿದ್ದಾನೆ. ಮಗು....ದೇವಯಾನಿ, ಇಂಥವನ ಸಂಗಡ ನೀನು ಮದುವೆಯನ್ನು ಮಾಡಿಕೊಳ್ಳುವ ವಳೇ? ಈತನು ನಿನ್ನ ಸಂಗಡ ಮದುವೆಯನ್ನು ಮಾಡಿ ಕೊಂಡು ದೇವಲೋಕಕ್ಕೆ ಹೋಗಿ, ಪ್ರತಿಯೊಬ್ಬರ ಎದುರಿ ನಲ್ಲಿ–ತಮ್ಮ ವಿಜಯದ ಪತಾಕೆಯೆಂದು–ನಿನ್ನನ್ನು ತೋರಿಸ

ಬಹುದು. ದೇವತೆಗಳು ನಿನ್ನ ಕಡೆಗೆ ಯಾವ ದೃಷ್ಟಿಯಿಂದ ನೋಡಬಹುದು! ನಿನ್ನನ್ನು ಕಂಡು ಹಾಸ್ಯಮಾಡಬಹುದು! ನಗಬಹುದು....! ಹೀಯಾಳಿಸಬಹುದು! ಇಷ್ಟೆಲ್ಲ ಅಪಮಾನ ವನ್ನು ನೀನು ಸಹಿಸಿಕೊಳ್ಳುವವಳೇ?

ದೇವಯಾನಿ

—ಕಚ........

ಶುಕ್ರಾಚಾರ್ಯ

—ಛೀ! ಈ ವಿಚಾರವೆ ನನಗೆ ಅಸಹ್ಯವಾಗಿ ತೋರುವುದು ದೇವಯಾನಿ....ಇಂಥವನ ಜೊತೆಯಲ್ಲಿ ಭಾವೀ ಆಯುಷ್ಯ ವನ್ನು ನೂಕುವವಳೇ ನೀನು! ಯಾವಾತನು ನಿನ್ನ ತಂದ ಯನ್ನು ರಸಾತಳಕ್ಕೆ ಮೆಟ್ಟಿ ಆತನ ಎದೆಯ ಮೇಲೆ ತಾಂಡವ ನೃತ್ಯವನ್ನು ನಡಿಯಿಸಿರುವನೋ ಅಂಥ ಅಧಮನ ಅರ್ಧಾಂಗಿ ಯೆಂದು ನೀನು ಆತನ ಹೆಸರಿನಿಂದ ಮಾಂಗಲ್ಯದ ಮಂಗಳ ಸೂತ್ರವನ್ನು ಕಟ್ಟಿಕೊಳ್ಳುವವಳೆ?

ದೇವಯಾನಿ

—ಅಪ್ಪಾಜಿ.......

ಶುಕ್ರಾಚಾರ್ಯ

—ದೇವಯಾನಿ ಯಾವನು ವಂಚನೆಯಿಂದ ಸಂಜೀವಿನಿ ವಿದ್ಯೆಯನ್ನು ಅಪಹರಿಸುವ ಹವಣಿಕೆಯಲ್ಲಿರುವನೊ ಅಂತಹ ಠಕ್ಕನ ಸಂಗಡ ನೀನು ಮದುವೆಯನ್ನು ಮಾಡಿಕೊಳ್ಳು ವವಳೇ? ಯಾವಾತನು ನನ್ನ ಶತ್ರುವಿನ ರಕ್ತ ಮಾಂಸದಿಂದ ಬೆಳೆದು ದೊಡ್ಡವನಾಗಿದ್ದಾನೆ ಅಂಥ ಅಧಮನ ಕೊರಳಲ್ಲಿ, ನೀನು ನಿನ್ನ ಕೋಮಲವಾದ ಕೈಗಳಿಂದ ಹೂಮಾಲೆಯನ್ನು

ಹಾಕುವವಳೇ? ಬೇಡ... ಬೇಡ... ದೇವಯಾನಿ.. .! ಈ ವಿಚಾರವನ್ನು ಮನಸ್ಸಿನಲ್ಲಿ ತರಬೇಡ.

**ದೇವಯಾನಿ**

—ಅಪ್ಪಾಜಿ....ಬೆಂದು ಕುದಿಯ ಬೇಡಿರಿ! ಕಚದೇವರಂತೂ ಇಲ್ಲಿ ಇಲ್ಲ! ಎಲ್ಲಿದ್ದಾರೆ ಇದರ ಸುಳುವು ಕೂಡ ಇಲ್ಲ! ಅಂದ ಮೇಲೆ ಅವರೇ ಇದಕ್ಕೆಲ್ಲ ಕಾರಣರೆಂದು ಹೇಗೆ ಹೇಳುವಿರಿ?

**ಶುಕ್ರಾಚಾರ್ಯ**

—ಈ ಕಚನು ನನ್ನ ಶತ್ರುವಿನ ಮಗನಿದ್ದಾನೆ. ಬೇವಿನಗಿಡದಿಂದ ಕೊನೆಗೆ ಕಹಿಫಲಗಳೇ ದೊರೆಯತಕ್ಕುವು.

**ದೇವಯಾನಿ**

— ನೀವನ್ನುವಂತೆ ಇಷ್ಟೆಲ್ಲ ಅನರ್ಥಕ್ಕೆ ಕಾರಣೀಭೂತನಾದ ನನ್ನ ಕಚನೆಲ್ಲಿ?

**ಶುಕ್ರಾಚಾರ್ಯ**

—ನನ್ನ ಹೊಟ್ಟೆಯಲ್ಲಿ (ಜಾಂಗಟೆಯ ಸದ್ದು)

**ದೇವಯಾನಿ**

—ಅಂದರೆ........

**ಶುಕ್ರಾಚಾರ್ಯ**

—ಹಲಾ....! ಏನಾಯಿತಿದು...ನನ್ನ ಅವಸ್ಥೆ? ಛೀ!

**ದೇವಯಾನಿ**

—ತಾತ....ಕಣ್ಣೀರು ಸುರಿಸಬೇಡಿರಿ. ಶಾಂತರಾಗಿರಿ! ಹೇಳಿರಿ ನಿಮ್ಮ ಹೊಟ್ಟೆಯಲ್ಲಿ ಕಚನು ಹೇಗೆ ಬಂದನು?

**ಶುಕ್ರಾಚಾರ್ಯ**

—ಹೇಗೆ ಬಂದನು? ದೇವಯಾನಿ. ನಿನ್ನ ಕಚನನ್ನು ಕೊಂದು ಸುಟ್ಟು, ಅವನ ಬೂದಿಯನ್ನು ನಾನು ಸೇವಿಸುವ ಮದ್ಯ

ವಲ್ಲಿ ಕೂಡಿಸಿ ಕೊಡುವುದರಲ್ಲಿ ಬಂದಿರುವದು. ಆತನು ನನ್ನ ಹೃದಯದ ಮರ್ಮಸ್ಥಾನದ ಮೇಲೆ... ಕಾಳಸರ್ಪದಂತೆ ಹೆಡೆ ತೆರೆದು ಕುಳಿತುಕೊಂಡಿದ್ದಾನೆ.

**ದೇವಯಾನಿ**

—(ದುಃಖದಿಂದ) ಅಂದರೆ....ಅಂದರೆ ನನ್ನ ಕಚನು ಜೀವ ದಿಂದಿರುವದಿಲ್ಲವೆ?

**ಶುಕ್ರಾಚಾರ್ಯ**

—ನಾನು ಏನನ್ನು ಮಾಡಲಿ? ನಿನ್ನ ಕಚನು ನನ್ನ ರಕ್ತದ ಪ್ರತಿಯೊಂದು ಕಣದಲ್ಲಿದ್ದಾನೆ. ನಿನ್ನ ಕಚನು ನನ್ನ ಹೃದ ಯದ ಮೇಲೆ ಸ್ವಾಮಿತ್ವವನ್ನು ಪಡೆದಿದ್ದಾನೆ! ಇಷ್ಟೆಲ್ಲ ಅನ ರ್ಥದ ಮೂಲ ಯಾರು ಗೊತ್ತೇ ನಿನಗೆ?

**ದೇವಯಾನಿ**

—ಯಾರು?

**ಶುಕ್ರಾಚಾರ್ಯ**

—ಯಾರೆಂದರೆ ಈ ಮದಿರೆ! ಮದಿರೆಯು ಬೆನ್ನು ಹತ್ತಿಯೇ ಇಷ್ಟೊಂದು ಅಧೋಗತಿಗೆ ನಾನು ತಲುಪಿದೆ. ಆದರೆ ನಾನು ಯಾರಿಗೂ ಅಂಜುವವನಲ್ಲ. ಪುನಃ ತಪಶ್ಚರ್ಯವನ್ನು ಮಾಡಿ ಸಂಜೀವಿನೀ ವಿದ್ಯೆಯನ್ನು ಸಂಪಾದಿಸುವ ಸಾಮರ್ಥ್ಯವು ನನ್ನಲ್ಲಿದೆ.

**ದೇವಯಾನಿ**

—ಸ್ಫುರಣೆ ಹೊಂದಿರಿ! ತಾಳ್ಮೆ ಹೊಂದಿರಿ! ಏನಾಗಿದೆ ನಿಮಗೆ? ಹೀಗೇಕೆ....

**ಶುಕ್ರಾಚಾರ್ಯ**

—ಕಂದಾ....ಏಳು ಜನ್ಮದಲ್ಲಿ ತೀರದ ಅವಮಾನ ನನ್ನ ಪಾಲಿಗೆ ಬಂದಿತು! ಇದನ್ನು ಹೇಗೆ ಸಹಿಸಲಿ?

ದೇವಯಾನಿ

—ಶಾಂತರಾಗಿ... ವಿಶ್ರಾಂತಿಯನ್ನು ಪಡೆಯಿರಿ.

ಶುಕ್ರಾಚಾರ್ಯರ

—ವಿಶ್ರಾಂತಿ! ದೇವಯಾನಿ... ಇನ್ನೆಲ್ಲಿಯ ವಿಶ್ರಾಂತಿ ನನಗೆ? ಇನ್ನು ಆಯುಷ್ಯದಲ್ಲಿಯ ಕೊನೆಯ ವಿಶ್ರಾಂತಿಯನ್ನೆ ಪಡೆಯುವ ಸಮಯ—ಬಂದೊದಗಿರುವದು.

ದೇವಯಾನಿ

—ಹೀಗೆ ಅಮಂಗಳವನ್ನಾಡಬೇಡಿರಿ! ಬಂದ ಕಠಿಣ ಪ್ರಸಂಗವನ್ನು ಧೈರ್ಯದಿಂದ ಎದುರಿಸಿರಿ! ಇದೊ... ಇದೋ ನೋಡಿರಿ... ವೃಷಪರ್ವ ಮಹಾರಾಜರು ಯುವರಾಜ, ಸೇನಾಪತಿ ಸಮೇತರಾಗಿ ಇತ್ತೆಡೆಗೆ ಬರುತ್ತಿದ್ದಾರೆ.

(ವೃಷಪರ್ವ, ಸೇನಾಪತಿ ಮತ್ತು ಯುವರಾಜರು ಪ್ರವೇಶಿಸಿ ಮದ್ಯದಿಂದ ತುಂಬಿದ ಕಲಶವನ್ನು ಶುಕ್ರಾಚಾರ್ಯರ ಮುಂದಿಟ್ಟು ನಮಸ್ಕರಿಸಿ ನಿಲ್ಲುವರು-)

ಯುವರಾಜ

—ಮಹಾರಾಜರು ಸ್ವೀಕರಿಸಬೇಕು.

ಶುಕ್ರಾಚಾರ್ಯ

—(ಎಲ್ಲರ ಕಡೆಗೆ ನೋಡಿ ಕ್ರೋಧದಿಂದ) ಮಾತಾಡಿರಿ, ಕಲ್ಲಿನ ಪುತ್ತಳಿಯಂತೆ ನಿಂತುಕೊಂಡಿರುವಿರೇಕೆ?

ದೇವಯಾನಿ

—ಏನನ್ನು ತಂದಿರುವಿರಿ ಯುವರಾಜ?

ವೃಷಪರ್ವ

—ಗುರುದೇವರ ಕೃಪಾಕಟಾಕ್ಷವು ನಮ್ಮ ಮೇಲೆ ಉಳಿಯುವ

ಇಚ್ಛೆಯಿಂದ ಪುರಜನರು ಮದಿರೋತ್ಸವವನ್ನು ನಡಿಸಿದ್ದಾರೆ. ಮತ್ತು....

**ದೇವಯಾನಿ**

— ಮತ್ತೇನು ?

**ಯುವರಾಜ**

—ಈ ಶುಭ ಪ್ರಸಂಗದಲ್ಲಿ ತಾವುಗಳು ಎಲ್ಲರಿಗೆ ದರ್ಶನ ಕೊಟ್ಟು ಆಶೀರ್ವದಿಸಬೇಕೆಂದು ಪ್ರಜೆಗಳೆಲ್ಲರು ಬೇಡಿಕೊಳ್ಳುತ್ತಿದ್ದಾರೆ

**ಶುಕ್ರಾಚಾರ್ಯ**

—ಏನದು ? ಇನ್ನೊಮ್ಮೆ ಮಾತಾಡಿರಿ ?

**ವೃಷಪರ್ವ**

—ಗುರುದೇವ, ತಮ್ಮ ದರ್ಶನಕ್ಕಾಗಿ ಎಲ್ಲರೂ ಕಾದುಕೊಂಡು ಕುಳಿತುಕೊಂಡಿದ್ದಾರೆ. ಮತ್ತು ಮದಿರೆಯಿಂದ ತುಂಬಿದ ಬಂಗಾರದ ಕಲಶವನ್ನು ತಮಗೆ ಕಳುಹಿ ಕೊಟ್ಟಿದ್ದಾರೆ.

**ಶುಕ್ರಾಚಾರ್ಯ**

—( ಕ್ರೋಧದಿಂದ- ) ರಾಜಾ....!

**ವೃಷಪರ್ವ**

—ಹೌದು....ಗುರುದೇವ ! ನಾಗರಿಕರು ತಮ್ಮ ದಾರಿಯನ್ನು ಕಾದುಕೊಂಡು ಕುಳಿತುಕೊಂಡಿದ್ದಾರೆ.

**ಶುಕ್ರಾಚಾರ್ಯ**

—ಪ್ರಜೆಗಳು ನನ್ನ ದಾರಿಯನ್ನು ಕಾದುಕೊಂಡು ಕುಳಿತುಕೊಂಡಿರುವರೇ ?

**ವೃಷಪರ್ವ**

—ಹೌದು ಮಹಾರಾಜ....

ಶುಕ್ರಾಚಾರ್ಯ

—ಇಲ್ಲ....! ಎಂದಿಗೂ ಇಲ್ಲ ! ರಾಜಾ, ಪ್ರಜೆಗಳು ನನಗಾಗಿ ಕಾದು ಕುಳಿತುಕೊಳ್ಳಲು ಶಕ್ಯವಿಲ್ಲ. ಇದರ ಹಿಂದೆ ಮೋಸ ವಿದೆ! ರಾಜಾ....ಇನ್ನು ಮೇಲೆ ಮೋಸ ವಂಚನೆಗಳು ಸಾಕು! ನನ್ನ ದಾರಿಯನ್ನು ಬೇರೆಯವರು ಕಾದುಕೊಂಡು ಕುಳಿತು ಕೊಂಡಿದ್ದಾರೆಂಬುದರ ಕಲ್ಪನೆಯಿದೆಯೆ ನಿನಗೆ ?

ಯುವರಾಜ

—( ಆತುರದ ದನಿಯಲ್ಲಿ— ) ಯಾರವರು ?

ಶುಕ್ರಾಚಾರ್ಯ

—ಮೃತ್ಯುದೇವತೆ.

ವೃಷಪರ್ವ, ಸೇನಾಪತಿ

—( ಆಶ್ಚರ್ಯದಿಂದ ) ಗುರು-ಮಹಾರಾಜ .. !

ಶುಕ್ರಾಚಾರ್ಯ

— ಹೌದು. ಮೃತ್ಯುದೇವತೆಯು ನನ್ನ ದಾರಿಯನ್ನು ಕಾದು ಕೊಂಡು ಕುಳಿತುಕೊಂಡಿದ್ದಾಳೆ.

ವೃಷಪರ್ವ

—ಗುರುದೇವರು ನಮ್ಮ ಚೇಷ್ಟೆಯನ್ನಾದರೂ ಮಾಡುತ್ತಿ ರಲಿಕ್ಕಿಲ್ಲವಷ್ಟೇ ?

ಶುಕ್ರಾಚಾರ್ಯ

—ನನ್ನ ಜೀವ ಹೋಗುವ ಪ್ರಸಂಗವೂ ನಿಮಗೆ ಚೇಷ್ಟೆ ಯಾಗಿ ತೋರುವುದಲ್ಲವೆ ?

ವೃಷಪರ್ವ

— ಹಾಗೆ ಕೋಪಗೊಳ್ಳಬೇಡಿರಿ ! ನಾಗರಿಕರು ಕಳಿಸಿದ್ದನ್ನು ಅಲ್ಲಗಳೆಯದೆ ಸ್ವೀಕರಿಸೋಣವಾಗಬೇಕು.

ಶುಕ್ರಾಚಾರ್ಯ

—( ಮಡಿಕೆಯು ಕಲಶ ಒಮ್ಮೆ) ರಾಜಾ, ನಾಚಿಕೆಯಾಗುವದಿಲ್ಲವೆ.........ಹಾಗೆ ಮಾಡಲು? ಇದು ನಿನ್ನ ಗುರುಭಕ್ತಿಯಲ್ಲವೆ ? ಧಿಕ್ಕಾರವಿರಲಿ ನಿನಗೆ! ಧಿಕ್ಕಾರವಿರಲಿ.........ನಿನ್ನ ಗುರುಭಕ್ತಿಗೆ........!

ಯುವರಾಜ

—ಗುರುರಾಜ, ಹೀಗೆ ಒಮ್ಮೆಲೆ ಕೋಪಿಸಬೇಡಿರಿ! ಶಿಷ್ಯಗಣದ ಪರೀಕ್ಷೆಯನ್ನಾದರೂ ಮಾಡಿರಿ!

ದೇವಯಾನಿ

—ಶಿಷ್ಯಗಣದ ಪರೀಕ್ಷೆಯನ್ನು ಹೊಸದಾಗಿ ಮಾಡುವ ಅವಶ್ಯಕತೆಯಿಲ್ಲ.

ಶುಕ್ರಾಚಾರ್ಯ

—( ಪರೀಕ್ಷೆ......! ತಿರಸ್ಕಾರಪೂರಿತ ನಗೆ ನಗುತ್ತ ) ಯುವರಾಜ, ಇದು ನಿಮ್ಮ ಪರೀಕ್ಷೆಯ ಸಮಯವಲ್ಲ! ಇದು ನನ್ನ ಪರೀಕ್ಷೆಯ ಸಮಯ! ಇದೇ ಅಲ್ಲವೆ ನಿನ್ನ ಗುರುಭಕ್ತಿ! ಯುವರಾಜ, ಕಚನು ನಮ್ಮ ಅನುಯಾಯಿ ಇರದ್ದರಿಂದ ಅವನಿಗೆ ನಾನು ದೇವಯಾನಿಯನ್ನು ಕೊಟ್ಟು, ಸಂಜೀವಿನಿ ವಿದ್ಯೆಯನ್ನು ವರದಕ್ಷಿಣೆಯನ್ನಾಗಿ ಕೊಡಬಹುದೆಂದು ಭಾವಿಸಿ ನೀವೆಲ್ಲರೂ ಕೂಡಿ ಅವನನ್ನು ಕೊಂದು, ಅವನ ಬೂದಿಯನ್ನು ನಾನು ಸೇವಿಸುವ ಮದ್ಯದಲ್ಲಿ ಕೂಡಿಸಿ ಕೊಟ್ಟಿರಿ! ಇದೇ ನಿಮ್ಮ ಗುರುಭಕ್ತಿಯಲ್ಲವೇ?

ದೇವಯಾನಿ

—( ಆಶ್ಚರ್ಯದ ಉದ್ಗಾರ— ) ಅಪ್ಪಾಜೀ........

ಶುಕ್ರಾಚಾರ್ಯ

—ಹೌದು ! ದೇವಯಾನಿ, ಇವರೆಲ್ಲರೂ ಕೂಡಿ ಕಚನನ್ನು ಕೊಂದಿದ್ದಾರೆ.

ದೇವಯಾನಿ

—( ಎಲ್ಲರ ಮೈಮೇಲೆ ಏರಿ ಹೋಗಿ— ) ನೀವೆಲ್ಲರೂ ಕೂಡಿ ನಿಮ್ಮ ಗುರುವನ್ನು ವಂಚಿಸಿದಿರಿ ! ನಿಮಗಾಗಿ ಶರೀರವನ್ನು ತೃಣಕ್ಕೆ ಬಗೆದು, ತಪಶ್ಚರ್ಯವನ್ನು ಮಾಡಿದಂಥ ಮಹಾಪುರುಷನೊಂದಿಗೆ ದ್ರೋಹವನ್ನು ಬಗೆದಿರಿ. ಯುವರಾಜ, ಕಚನನ್ನು ಎರಡು ದಿನಗಳಿಂದ ನೋಡಿಲ್ಲವೆಂದು ಧಾರಾಳವಾಗಿ ಹೇಳಿದಿರಲ್ಲವೆ ನೀವು ನನಗೆ........ !

ವೃಷಪರ್ವ

—ಗುರು ಮಹಾರಾಜರು, ಗುರುಕನ್ಯೆಯರು ಕ್ಷಮಿಸಬೇಕು. ಸ್ವಜನರ ಕಲ್ಯಾಣಕ್ಕಾಗಿ ಹೀಗೆ ಮಾಡುವ ಬಾರಿ ಬಂದಿತು ನಮಗೆ !

ಶುಕ್ರಾಚಾರ್ಯ

—ರಾಜಾ........ಸ್ವಜನರ ಹಿತಕ್ಕಾಗಿ ನೀನು ಹೀಗೆ ಮಾಡಿದಿಯಾ ? ಆದರೆ ನೀನು ಮಾಡಲು ಹೋದೆ ಒಂದು ! ಆಯಿತು ಬೇರೊಂದು ! ವಿಸ್ವಾಸಘಾತಕಿ ! ವಿಸ್ವಾಸದಿಂದ ಕೊರಳು ಕೊಟ್ಟವರ ಕುತ್ತಿಗೆಯನ್ನು ಕೊಯ್ಯುವ ಕಟುಕ ! ಸುಳ್ಳಾಡುವದಕ್ಕೆ ನಾಚಿಕೆಯಾಗುವದಿಲ್ಲವೆ ನಿನಗೆ ? ನೀನು ನಿನ್ನ ಕೈಯಿಂದಲೇ ನಿನ್ನ, ನಿನ್ನ ಅನುಯಾಯಿಗಳ ಮತ್ತು ಪರಿವಾರದ ನಾಶವನ್ನು ಮಾಡಿಕೊಂಡೆ ! ನನ್ನ ನಾಶವನ್ನು ಮಾಡಿದೆ ! ನನ್ನನ್ನೂ ಅಪಮಾನಪಡಿಸದೆ !

ವೃಷಪರ್ವ

—ಗುರುದೇವ...

ಶುಕ್ರಾಚಾರ್ಯ

—ಸದ್ಯಕ್ಕೆ ಕಚನು ನನ್ನ ಹೃದಯ ಮನಸ್ಸುಗಳ ಒಡೆಯನಾಗಿದ್ದಾನೆ. ಇದನ್ನು ಬೃಹಸ್ಪತಿ ದೇವೇಂದ್ರನು ಅರಿತ ಕೂಡಲೆ ನಿನ್ನ ಜೊತೆಯಲ್ಲಿ ಯುದ್ಧವನ್ನು ಆರಂಭಿಸಬಹುದು. ಈ ಯುದ್ಧದಲ್ಲಿ ಸತ್ತ ನಮ್ಮ ಜನರನ್ನು ಉಳಿಸುವದಕ್ಕೋಸ್ಕರ ನಾನು ಸಂಜೀವಿನಿ ವಿದ್ಯೆಯ ಉಚ್ಚಾರವನ್ನು ಮಾಡಿದೆನೆಂದರೆ—ನನ್ನ ಹೃದಯದಲ್ಲಿ ಪಾನವಾಗಿ ಕುಳಿತ ಕಚನಿಗೆ ಅದು ಮೊದಲು ಕೇಳಿ ಸಂಜೀವಿನಿ ವಿದ್ಯೆಯು ಆತನ ಹಸ್ತಗತವಾಗಬಹುದು ......ಸೇನಾಪತಿಗಳೆ !

ಸೇನಾಪತಿ

—ಗುರುರಾಜ, ಮಹಾರಾಜರು ಮತ್ತು ಯುವರಾಜರು ಸ್ವಾರ್ಥದಿಂದ ಕುರುಡರಾಗಿ ಈ ಕೃತ್ಯವನ್ನು ಮಾಡಿಲ್ಲವೆಂಬುದು ತಮ್ಮ ಪಾದಕ್ಕೆ ಅರಿತ ವಿಷಯವಾಗಿರುವದು.

ದೇವಯಾನಿ

—ಸೇನಾಪತಿಗಳೆ, ನಡೆದು ಹೋದ ಘಟನೆಯು ಸ್ಪಷ್ಟವಾಗಿ ಇರುತ್ತಿರಲಾಗಿ ಅದನ್ನು ಮುಚ್ಚಲು ಪ್ರಯತ್ನಿಸಬೇಡಿರಿ ನೀವು!

ಶುಕ್ರಾಚಾರ್ಯ

—ರಾಜಾ, ಯುವರಾಜರು ಸ್ವಜನರ ಹಿತವನ್ನು ಸಾಧಿಸುವದರ ಬದಲು ಅವರ ದ್ರೋಹವನ್ನೆ ಬಗೆದಿದ್ದಾರೆ— ಸೇನಾಪತಿಗಳೆ! ಯುವರಾಜರು ಸ್ವಾರ್ಥವನ್ನು ಸಾಧಿಸುವ ಉದ್ದೇಶದಿಂದ ಈ ಕೃತ್ಯವನ್ನು ಮಾಡಿದ್ದಾರೆ. ಇದನ್ನು ನೀವು ಅರಿತವರಾಗಿರದಿದ್ದರೂ ನಾನು ಅರಿತಿದ್ದೇನೆ.

ಯುವರಾಜ

—ಕೋಪಗೊಳ್ಳಬೇಡಿರಿ ಗುರುದೇವ....! ನಾನು ಸ್ವಲ್ಪ ಸ್ಪಷ್ಟವಾಗಿ ಮಾತಾಡುತ್ತಿರುವೆನೆಂದು—ಕೋಪಗೊಳ್ಳದೆ ಕ್ಷಮಿಸಿರಿ! ಇನ್ನು ಮುಂದೆ ಯುದ್ಧದಲ್ಲಿ ಮಡಿದ ವೀರರನ್ನು ಜೀವಂತಮಾಡುವ ಗೊಡವೆಗೆ ನೀವು ಹೋಗಬೇಡಿರಿ...! ಸಂಜೀವಿನಿ ಮಂತ್ರವನ್ನು ಜಪಿಸಬೇಡಿರಿ. ಅಂದರೆ ಕಚನು ಜೀವಂತನಾಗುವದಿಲ್ಲ ಜೀವಂತನಾಗದಿದ್ದರೆ- ನಮಗೆ ಯಾವ ಅಂಜಿಕೆಯೂ ಇಲ್ಲ—! ಆದ್ದರಿಂದ ಗುರುವರ್ಯರ ಪಾದದ ಬಳಿಯಲ್ಲಿ ಇಷ್ಟೇ ನನ್ನ ನಮ್ರ ವಿನಂತಿಯಿದೆ—ಸಂಜೀವಿನಿ ವಿದ್ಯೆಯ ಉಪದೇಶವನ್ನು—ನನಗೆ ಮೊದಲು ಮಾಡಿರಿ! ಮತ್ತು ತಮ್ಮ ಪಟ್ಟ ಶಿಷ್ಯನ ಸ್ಥಾನವನ್ನು ...

ಶುಕ್ರಾಚಾರ್ಯ

—ನಿನಗೆ ಕೊಡಬೇಕೆ?

ಯುವರಾಜ

—ಹೌದು ಗುರುದೇವ—

ದೇವಯಾನಿ

—ಪಟ್ಟ ಶಿಷ್ಯನ ಸ್ಥಾನವು ನಿಮಗೆ ಬೇಕೆ ಯುವರಾಜ? ಉಹ್ಞ! ಅಪ್ಪಾಜಿ.... ಈ ಚಾಂಡಾಲನ ಮಾತುಗಳನ್ನಾದರೂ ನೀವು ಹೇಗೆ ಕೇಳಿಕೊಳ್ಳುವಿರಿ? ನಾಳೆ....ಸಂಜೀವಿನಿ ವಿದ್ಯೆಯ ಜೊತೆಯಲ್ಲಿ ನನ್ನನ್ನು ಬೇಡುವುದಕ್ಕೆ ಸಹ ಈ ಅಧಮನು ಹಿಂಜರಿಯಲಿಕ್ಕಿಲ್ಲ. ಸ್ವಾರ್ಥಿಯಾದ ಈತನು ಯಾವುದೇ ನೀಚ ಕಾರ್ಯವನ್ನು ಮಾಡುವದಕ್ಕೆ ಹೇಸಲಿಕ್ಕಿಲ್ಲ! ಅಂಜಲಿಕ್ಕಿಲ್ಲ! (ಕ್ರೋಧದಿಂದ) ಯುವರಾಜ, ಲಕ್ಷಗೊಟ್ಟುಕೇಳು ನನ್ನ ಕಚನು ಮೃತನಾಗಿಲ್ಲ! ಆತನು ಚಿರಂಜೀವಿಯಿದ್ದಾನೆ!

ಅಭೇದ್ಯವಾದ ಅಪ್ಪಾಜಿಯವರ ಹೃದಯದಲ್ಲಿ ಅವನು ಜೀವಂತನಿದ್ದಾನೆ. ಅವನಿಗೇ ಸಂಜೀವಿನಿ ವಿದ್ಯೆ ದೊರೆಯು ತಕ್ಕದ್ದು. ಕಚನಿಂದಲೆ ನಿಮ್ಮೆಲ್ಲರ ನಾಶವಿದೆ! ಸಂಜೀವಿನಿ ವಿದ್ಯೆಯ ಆಶೆಯಿಂದ ನೀನು ನನ್ನ ಹೃದಯವನ್ನು ಚೂರು ಚೂರು ಮಾಡಿದೆ! ನನ್ನ ಕೋಮಲವಾದ ಪ್ರೇಮದ ಮೇಲೆ ಕೆಂಡವನ್ನಿಟ್ಟೆ! ಆದರೆ ನೀನು ಅದರಲ್ಲಿ ಯಶ ಪಡೆಯದೆ ಹೋದೆ....

### ಯುವರಾಜ

— ಗುರು ಶ್ರೇಷ್ಠರು ಸಂಜೀವಿನಿ ವಿದ್ಯೆಯನ್ನು ತಮ್ಮ ಅನುಯಾಯಿಗಳಿಗೇ ಕೊಡುವ ಸಂಕಲ್ಪವನ್ನು ಮಾಡಿದ್ದಾರೆ. ಆದ್ದರಿಂದ ಅದು ನನಗೆ ನ್ಯಾಯದಿಂದ ದೊರೆಯಬೇಕು.

### ವೃಷಪರ್ವ

— ಹೌದು ಗುರುಪುತ್ರಿ, ಯುವರಾಜರ ಮಾತು ಸರಿಯಿದೆ.

### ದೇವಯಾನಿ

— ಯುವರಾಜ, ನನ್ನನ್ನು ವಂಚಿಸಬೇಡ ನೀನು! ಇಷ್ಟೆಲ್ಲ ವಂಚನೆಯ ಮೂಲ ನೀನೇ ಇರುವಿ! ಗುರುವಿನಿಂದ ವಿದ್ಯೆಯನ್ನು ಸಂಪಾದಿಸುವ ಮೊದಲು ಗುರುಕನ್ಯೆ ನಿನಗೆ ಶಾಪವನ್ನು ಕೊಡುತ್ತಿದ್ದಾಳೆ. ಕೇಳು....ಲಕ್ಷಗೊಟ್ಟು ಕೇಳು.... ನಿನಗೆ ಯಾವುದೇ ವಿದ್ಯೆಯ ದರ್ಶನವಾಗಲಿಕ್ಕಿಲ್ಲ....! ಲಕ್ಷ್ಮೀ ಪ್ರಾಪ್ತಿಗಾಗಿ ಸದಾ ಸರ್ವಕಾಲ ಪ್ರಯತ್ನಿಸುವ ನಿನಗೆ ದಾರಿದ್ರ್ಯಾವಸ್ಥೆಯು ಪ್ರಾಪ್ತವಾದೀತು. ಇದಲ್ಲದೆ... ಸ್ತ್ರೀ ಸುಖಕ್ಕಾಗಿ ಹಂಬಲಿಸುವ ನಿನಗೆ....ಎಂದಿಗೂ ಸ್ತ್ರೀಪ್ರಾಪ್ತಿಯಾಗಲಿಕ್ಕಿಲ್ಲ.

ವೃಷಪರ್ವ

—ಗುರುಕನ್ಯೆ ...ಗುರುಕನ್ಯೆ ...ಶಾಂತಳಾಗು ...!

ಸೇನಾಪತಿ

—ಸಿಟ್ಟಿನ ಭರದಲ್ಲಿ ಹೀಗೆ ಶಾಪವನ್ನು ಕೊಡುವದುಚಿತವಲ್ಲ! ಇದರಲ್ಲಿ ನಮ್ಮ ಮತ್ತು ನಮ್ಮ ಅನುಯಾಯಿಗಳ ಹಾನಿ ಯಿದೆ.

ದೇವಯಾನಿ

— ತಿರಸ್ಕಾರದಿಂದ) ಇದನ್ನು ಅರಿತವರಾಗಿದ್ದರೂ ಈ ಕೃತ್ಯ ವನ್ನು ಮಾಡಿದಿರಲ್ಲವೆ?

ವೃಷಪರ್ವ

—(ಗುರುಗಳ ಪಾದಹಿಡಿದು) ಗುರುದೇವ ...ಗುರುದೇವ ಶಿಷ್ಯ ನಿಂದ ಆದ ತಪ್ಪನ್ನು ಕ್ಷಮಿಸಿರಿ! ದೇವಯಾನಿಗೆ ಶಾಪವನ್ನು ಹಿಂದೆ ತೆಗೆದುಕೊಳ್ಳುವುದಕ್ಕೆ ಹೇಳಿರಿ.

ಶುಕ್ರಾಚಾರ್ಯ

—ಸರ್ವರ ನಾಶಕ್ಕೆ ಕಾರಣೀಭೂತನಾದ ನಿನಗೆ ಕ್ಷಮೆ ಯಾಚಿಸಲು ಅಧಿಕಾರವಾದರೂ ಎಲ್ಲಿ ಉಳಿದಿರುವದು? ದೇವಯಾನಿಯು ಒಳ್ಳೆಯದನ್ನೆ ಮಾಡಿದ್ದಾಳೆ.

ಸೇನಾಪತಿ

—ಗುರುದೇವರು ಕೋಪಿಸದೆ ಶಾಂತರಾಗಿ ಆದ ತಪ್ಪನ್ನು ಕ್ಷಮಿಸಬೇಕೆಂದು ಈ ದಾಸನ ಪ್ರಾರ್ಥನೆಯಿದೆ.

ಶುಕ್ರಾಚಾರ್ಯ

—ಸೇನಾಪತಿಗಳೆ, ಅದು ಸಾಧ್ಯವಿಲ್ಲ.

ಯುವರಾಜ

—ಅಜ್ಞಾನದಿಂದ ಮಾಡಿದ ತಪ್ಪನ್ನು ಕ್ಷಮಿಸಿರಿ ಗುರುದೇವ!

ನಮ್ಮನ್ನು ನಿಜವಾದ ಮಾರ್ಗಕ್ಕೆ ಹಚ್ಚುವ ಭಾರವು ನಿಮ್ಮನ್ನೆ ಕೂಡಿರುವದು.

ಶುಕ್ರಾಚಾರ್ಯ

—ಅದರ ಉಪಯೋಗವೇನೂ ಇಲ್ಲ! ಯುವರಾಜ, ನನ್ನ ಶರೀರದ ಮೇಲೆ ಆದ ಮದಿರೆಯ ಪ್ರಭಾವವು ಕಡಿಮೆಯಾಗಲಿ, ನನ್ನ ಶರೀರದಲ್ಲಿ ಪುನಃ ಸಂಜೀವಿನಿ ವಿದ್ಯೆಯು ಚೇತರಿಸಿತೆಂದೇ ತಿಳಿ! ಆಮೇಲೆ ಕಚನು ಆ ವಿದ್ಯೆಯನ್ನು ನನ್ನಿಂದ ಸಂಪಾದಿಸಿ, ದೇವಲೋಕಕ್ಕೆ ನಗುತ್ತ ಹೋಗಬಹುದು, ನನ್ನ ಜಡ ಶರೀರವು ಮಾತ್ರ ಇಲ್ಲಿ ನರಿ, ನಾಯಿ, ಹದ್ದುಗಳಿಗೆ ಆಹಾರವಾಗಿ ಉಳಿಯಬಹುದು. ಒಂದು ವೇಳೆ ಕಚನಿಗೆ ನನ್ನ ವಿಷಯದಲ್ಲಿ ದಯೆ ಉಂಟಾದರೆ....ನನ್ನನ್ನು ಜೀವಂತಮಾಡಬಹುದು, ಇಲ್ಲದಿದ್ದರೆ........

ದೇವಯಾನಿ

—ಇಲ್ಲ...! ಇಲ್ಲ ಅಪ್ಪಾಜಿ....! ಕಚದೇವರು ಅಷ್ಟೊಂದು ಕಠೋರರಿಲ್ಲ. ನೀವು ಭಾವಿಸುವಂತೆ ಅವರಿಲ್ಲ. ನಿಮ್ಮನ್ನು ಅವರು ನಿಶ್ಚಯವಾಗಿಯೂ ಜೀವಂತಮಾಡಬಹುದು.

ಶುಕ್ರಾಚಾರ್ಯ

—(ನಿರಾಶೆಯಿಂದ) ಮಾಡಬಹುದು.. ಇಲ್ಲ! ಇದನ್ನಾರು ಕೇಳಬಲ್ಲರು! ರಾಜಾ, ನಾನು ಸ್ವಲ್ಪ ಮಾತ್ರ ಸಮಯದವನು ಇರುವೆನು. ಅಸುರರ ಗುರುವಾದ ಶುಕ್ರಾಚಾರ್ಯನು....ಸತ್ತು ಬಿದ್ದಿದ್ದಾನೆ....ಆತನನ್ನು ಜೀವಂತಮಾಡಿರಿ ಎಂದು ಅಂಗಲಾಚಿ, ಪದರು ಪಸರಿಸಿ ಶತ್ರುಗಳ ಎದುರಿನಲ್ಲಿ ದೇವಯಾನಿ ಜೀವದಾನ ಭಿಕ್ಷೆಯನ್ನು ಬೇಡುವುದು ಕಡಿಮೆ ಅಪಮಾನವೆ? ಇಂಥ ಪರಿಸ್ಥಿತಿಯ ಭೀಷಣ ಚಿತ್ರವು ಎದುರು

ಬಂದು ನಿಂತಾಗ ಮದ್ಯವನ್ನು ಕುಡಿಯುತ್ತಲೆ ಈ ದೇಹದ ತ್ಯಾಗವನ್ನು ಮಾಡಿಬಿಡಬೇಕೆಂದೆನಿಸುವದು.

ವೃಷಪರ್ವ

—ಗುರುಕನ್ಯೆ.... ನನ್ನನ್ನು ಕ್ಷಮಿಸಬೇಕು.

ದೇವಯಾನಿ

—ಇನ್ನು ಕ್ಷಮಿಸಿ ಏನೂ ಪ್ರಯೋಜನವಿಲ್ಲ. ಅನುಯಾಯಿಗಳ ಎದುರಿನಲ್ಲಿ ಅಪ್ಪಾಜಿಯುವರಿಗೆ ನನ್ನ ಬೆಲೆ ಕೂಡ ಇಲ್ಲ. ತಮ್ಮ ಸರ್ವನಾಶದ ಕಡೆಗೆ ಲಕ್ಷವಿಲ್ಲ! ಇದನ್ನು...

ವೃಷಪರ್ವ

—ನಾವೂ ಅರಿತು ಬಲ್ಲೆವು ಗುರುಪುತ್ರಿ ...

ದೇವಯಾನಿ

—ಅಧಿರಾಜ, ಎಲ್ಲದರ ನಾಶವನ್ನು ಅಪ್ಪಾಜಿಯುವರು ಶಾಂತಚಿತ್ತದಿಂದ ನೋಡಬಹುದು. ಆದರೆ ಶತ್ರುವಾದ ಬೃಹಸ್ಪತಿಯ ಎದುರಿನಲ್ಲಿ ಮತ್ತು ದೇವೇಂದ್ರನ ಎದುರಿನಲ್ಲಿ ಅವರು ಎಂದಿಗೂ ತಮ್ಮ ಶಿರವನ್ನು ಬಾಗಿಸಲಿಕ್ಕಿಲ್ಲ! ಅವರ ವರ್ಚಸ್ಸನ್ನು ಉಸಿರು ಇರುವ ವರೆಗೆ ಎಂದಿಗೂ ಒಪ್ಪಲಿಕ್ಕಿಲ್ಲ. ಕಚನ ಮೇಲಿನ ಪ್ರೇಮದಿಂದ ನಾನು ಹೀಗೆ ಮಾತಾಡುತ್ತಿರುವೆನೆಂದು ನೀವು ಭಾವಿಸಬೇಡಿ! ಆದರೆ ಸದ್ಯಕ್ಕೆ ದೈವದ ಬಲವು ದೇವತೆಗಳ ಕಡೆಗೇ ಇರುವದು.

ವೃಷಪರ್ವ

—ಆದರೆ.........

ದೇವಯಾನಿ

—ಅಧಿರಾಜ, ಇನ್ನೂ ನಿಮ್ಮ ಮನಸ್ಸಿನಲ್ಲಿ ಸಂದೇಹವೆ?

ನೀವು ಅಸುರರ ಪ್ರಮುಖರು ! ನೀವೇ ಮುಂದಾಗಿ, ಆಗುವ ಹಾನಿಯಿಂದ ಒದಗುವ ಸಂಕಟದಿಂದ ನಿಮ್ಮ ಗುರುಗಳನ್ನು ತಥಾ ಅನುಯಾಯಿಗಳನ್ನು ಉಳಿಸಿಕೊಳ್ಳಲು ಬೇಡವೆ ?

**ವೃಷಪರ್ವ**

—ಗುರುಕನ್ಯೆ....ನೀನು ಮಾತಾಡುವದರ ಅರ್ಥವೆ ನನಗೆ ತಿಳಿಯದಂತಾಗಿರುವದು. ಹೇಳಬೇಕಾದುದನ್ನು ಸ್ಪಷ್ಟವಾಗಿ ಹೇಳಬೇಕು.

**ಸೇನಾಪತಿ**

—ಮಹಾರಾಜರ ಮಾತು ಸತ್ಯವಾಗಿದೆ ಗುರುಪುತ್ರಿ.

**ದೇವಯಾನಿ**

—ಅಧಿರಾಜ, ನೀವುಗಳು ಯುವರಾಜ ಸಮೇತರಾಗಿ ಅಪ್ಪಾಜಿಯವರಿಗೆ ಹೀಗೆ ವಿನಂತಿ ಮಾಡಿಕೊಳ್ಳಿರಿ ......ಕೇವಲ ಸಂಜೀವಿನಿ ವಿದ್ಯೆಯನ್ನು ಕೊಡುವುದರ ಬದಲು ಅಳಿಯನಾಗಲಿರುವ.......

**ಯುವರಾಜ**

—ಅಳಿಯ .......!

**ದೇವಯಾನಿ**

—ಹೌದು ! ಅಳಿಯನಾಗಲಿರುವ ಕಚದೇವರಿಗೆ ಸಂಜೀವಿನಿ ವಿದ್ಯೆಯನ್ನು ವರದಕ್ಷಿಣೆಯಾಗಿ ಕೊಡಿರೆಂದು ನಿಮ್ಮ ಗುರುಗಳಿಗೆ ಬಿನ್ನವಿಸಿಕೊಳ್ಳಿರಿ. ಇದರಲ್ಲಿ ನಿಮ್ಮ ಮತ್ತು ನಿಮ್ಮ ಅನುಯಾಯಿಗಳ ಕಲ್ಯಾಣವಿರುವದು.

**ಯುವರಾಜ**

—( ಸಿಟ್ಟಿನಿಂದ ) ಇಲ್ಲ ! ಎಂದಿಗೂ ಇದು ಶಕ್ಯವಿಲ್ಲ! ಸಂಜೀವಿನಿ ವಿದ್ಯೆಯು ನಮ್ಮ ಪರಂಪರೆಯವರಿಗೇ ದೊರೆಯಬೇಕು. ಅವರ ಜೊತೆಯಲ್ಲಿ........

ದೇವಯಾನಿ

—ದೇವಯಾನಿಯೂ ನಿಮಗೆ ದೊರೆಯಬೇಕಲ್ಲವೆ ? ಆದರೆ ಯುವರಾಜ, ಹೀಗೆ ಮಾಡುವದರಿಂದ....ಮೊದಲಿಗಿಂತಲು ಹೆಚ್ಚಿಗೆ ಹಾನಿಯಿದೆ ..! ಅಧಃಪತನವು ಹೆಚ್ಚಿದೆ.

ವೃಷಪರ್ವ

—ಗುರುಕನ್ಯೆಯ ವಿಚಾರವು....

ಸೇನಾಪತಿ

—ದೂರದೃಷ್ಟಿಯಿಂದ ಕೂಡಿದ್ದು ಮತ್ತು ಧೂರ್ತತನದ್ದು ಇರುವದು. ಆದರೆ...

ಯುವರಾಜ

—ಸಂಜೀವಿನಿ ವಿದ್ಯೆ ಹಾಗೂ ದೇವಯಾನಿಯನ್ನು ಕಚನಿ ಗೆಂದಿಗೂ ಒಪ್ಪಿಸಲಾಗದು, ಕೊಡಬಾರದು !

ದೇವಯಾನಿ

—ಯುವರಾಜ, ಅದು ನಿಮ್ಮ ಪ್ರಶ್ನೆಯಲ್ಲ. ಅಪ್ಪಾಜಿ ಯುವರದಿದೆ.

ವೃಷಪರ್ವ

—ಯುವರಾಜ ಶಾಂತರಾಗಿರಿ ! ಗುರುಕನ್ಯೆ, ಮಹಾರಾಜ ರಿಗೆ ನಮ್ಮ ವಿಚಾರವು ಸ್ತುತ್ಯವಾಗಿ ತೋರಬಹುದೇ ?

ಸೇನಾಪತಿ

—ತೋರದೇನು ಮಹಾರಾಜ...ಬಂದ ಈ ಸಂಕಟದಿಂದ ಪಾರಾಗಲು ಇದೊಂದೇ ಮಾರ್ಗವಿರುವದು.

ಶುಕ್ರಾಚಾರ್ಯ

—( ಒಮ್ಮೆಲೆ ಚೇತರಿಸಿ ) ರಾಜಾ, ಯಾವ ವಿಚಾರ ಮಾಡಿ ಫಲವೇನು ? ಏನಾಯಿತಿದು ! ನಾಶ....! ಸರ್ವನಾಶ...!

ಅಧಃಪತನ...! ಧಿಕ್ಕಾರವಿರಲಿ ಈ ನನ್ನ ಜೀವನಕ್ಕೆ....! ರಾಜಾ....ಎಲ್ಲಿರುವಿ ನೀನು ...! ನಮ್ಮೆಲ್ಲರ ಸರ್ವಸ್ವದ ನಾಶವಾಯಿತು! ದಾನವರ ವಂಶವು ಮಣ್ಣುಗೂಡುವ ಪ್ರಸಂಗವು ಬಂದಿತು. ಮದಿರೆಯು ನನ್ನ ಅವಿಚಾರದ ಲಾಭವನ್ನು ಪಡೆದುಕೊಂಡು, ನಮ್ಮ ನಾಶವನ್ನು ಮಾಡಿದಳು. ಅಲ್ಲದೆ ಶತ್ರುಗಳ ಎದುರಿನಲ್ಲಿ ಸಟೆದು ನಿಂತ ನನ್ನ, ನಿಮ್ಮ ಮಸ್ತಕಗಳನ್ನು ಬಗ್ಗಿಸಿದಳು. ನನ್ನಿಂದ ಇಂತಹ ಅಪಮಾನವನ್ನು ಸಹಿಸಲಿಕ್ಕಾಗದು ಇದಕ್ಕಿಂತಲೂ ಮೃತ್ಯುವನ್ನು ಆಲಂಗಿಸಿದಲ್ಲಿ ತಪ್ಪೇನಿದೆ?

**ವೃಷಪರ್ವ**

—ಗುರುದೇವ....ಗುರುದೇವ...ಶಾಂತರಾಗಿರಿ !

**ಶುಕ್ರಾಚಾರ್ಯ**

—ರಾಜಾ, ಉಗ್ರತಪಸ್ಸನ್ನಾಚರಿಸಿ ಮಾಡಿ, ಸಂಜೀವಿನಿ ವಿದ್ಯೆಯನ್ನು ಸಂಪಾದಿಸಿದ ಈ ಶುಕ್ರಾಚಾರ್ಯನಿಗೆ ಎರಡನೆಯವರಿಂದ ಜೀವಂತನಾಗುವ ಪ್ರಸಂಗ ಬರಬೇಕೆ ? ರಾಜಾ ಹೇಳು, ನನ್ನ ಜೀವಕ್ಕೆ ಹೇಗೆ ಶಾಂತಿಯೆನಿಸಬೇಕು ? ನೀವೆಲ್ಲರು ವಿವೇಕ ಬುದ್ಧಿಯ ನಾಲ್ಕು ಮಾತುಗಳನ್ನು ಹೇಳಿದರೂ ಅದಕ್ಕೆ ನನ್ನ ಮನಸ್ಸು ಒಪ್ಪದು !

**ವೃಷಪರ್ವ**

-ಗುರುದೇವ...

**ಶುಕ್ರಾಚಾರ್ಯ**

—(ಸಿಟ್ಟಿನಿಂದ) ಬನ್ನಿರಿ....ಬನ್ನಿರಿ....!ಎಲ್ಲ ಅಶುಭಗ್ರಹಗಳು ಒಂದಾಗಿ ಬನ್ನಿರಿ! ಎಲ್ಲರೂ ಕೂಡಿ, ಈ ಶುಕ್ರಾಚಾರ್ಯನನ್ನು ಮಣ್ಣು ಪಾಲುಮಾಡಿರಿ....! ಶುಕ್ರಾ ...ಉಗ್ರತಪಸ್ವಿಯ

ವನ್ನು ಮಾಡಿ, ಸಂಜೀವಿನಿ ವಿದ್ಯೆಯನ್ನು ಸಂಪಾದಿಸಿದ ನೀನು ದೇವತೆಗಳನ್ನು ಲೆಕ್ಕಿಸಲಿಲ್ಲ. ದೇವಾಧಿದೇವನಾದ ದೇವೇಂದ್ರ ನನ್ನೂ ಲೆಕ್ಕಿಸಲಿಲ್ಲ. ಅವನನ್ನು ಹೀನ ದೀನನೆಂದು ಭಾವಿಸಿದೆ. ಆದರೆ ಕೊನೆಗೆ ಮದಿರೆಯ ಬೆನ್ನು ಹತ್ತಿ ಹಾಳಾದೆಯಲ್ಲವೆ? ಜಗತ್ತಿನಲ್ಲಿರುವ ಎಲ್ಲ ವಿದ್ಯೆಗಳೇ, ಒಂದುಗೂಡಿ ಬಂದು —ನನಗೆ ಶಾಪಕೊಡಿರಿ! ಆಁ! ಇದೇನು? ಅಚಲವಾದ ಮೇರು ಪರ್ವತವು ಕೂಡ ನನ್ನ ಕೃತಿಯನ್ನು ಕಂಡು ಗಹಗಹಿಸಿ ನಗುತ್ತಿದೆ.

**ವೃಷಪರ್ವ**

—ಸೈರಿಸಿ ಗುರುದೇವ....

**ಶುಕ್ರಾಚಾರ್ಯ**

—ಹ್ಞಂ... ಇದೇನು? ಎಂಟೂ ದಿಕ್ಪಾಲಕರು ಇಷ್ಟೊಂದು ಕುತ್ಸಿತ ಬುದ್ಧಿಯಿಂದ ನನ್ನ ಕಡೆಗೆ ನೋಡುತ್ತಿರುವರೇಕೆ? ಎಲ್ಲ ತಪಸ್ವಿಗಳು ನನ್ನೀಕೃತಿಯಿಂದ ನಾಚಿಕೆ ಪಟ್ಟು—ಮುಖ ತಗ್ಗಿಸಿಕೊಂಡು ಕುಳಿತು ಕೊಂಡಿದ್ದಾರೆ. (ಆವೇಶದಿಂದ ಆಕಾಶದೆಡೆಗೆ ನೋಡಿ—) ಚಂದ್ರ-ಸೂರ್ಯರೆ, ನೀವಿರುವ ವರೆಗೆ ಮದಿರೆಯ ವಶವಾಗಿ, ಸರ್ವಸ್ವವನ್ನು ಕಳೆದುಕೊಂಡು ಹಾಳಾದ ಈ ಶುಕ್ರಾಚಾರ್ಯನ ದುರವಸ್ಥೆಯನ್ನು ಜಗತ್ತಿಗೆ ಹೇಳಿರಿ. ಮಂದ ಮಾರುತನೆ. ನೀನು ಹೋದಲ್ಲಿ ನನ್ನ ಅವನತಿಯನ್ನು ಹೇಳು. ಮೇಘಮಂಡಲವೆ, ಶುಕ್ರಾಚಾರ್ಯನು ಮದಿರೆಯ ಬೆನ್ನುಹತ್ತಿ ಮಾಡಿಕೊಂಡ ಸರ್ವಸ್ವದ ನಾಶವನ್ನು ಗುಡುಗಿನ ಅಬ್ಬರದೊಂದಿಗೆ—ಮುಂದಿನ ಯುಗಗಳಲ್ಲಿ ಜಗತ್ತಿಗೆ ಹೇಳು!

**ದೇವಯಾನಿ**

-ಅಪ್ಪಾಜಿ. . ಎಷ್ಟೊಂದು ತ್ರಾಸು ಮಾಡಿಕೊಳ್ಳುತ್ತಿರುವಿರಿ?

**ಶುಕ್ರಾಚಾರ್ಯ**

—ಉಪನಿಷತ್ತು— ವೇದಗಳನ್ನು ಓದುವ ವಿದ್ಯಾರ್ಥಿಗಳೇ, ಮದಿರೆಯಿಂದ ಹಾಳಾದ ಶುಕ್ರಾಚಾರ್ಯನನ್ನು ಧಿಕ್ಕರಿಸಿರಿ! ಬ್ರಹ್ಮಯಜ್ಞವನ್ನುವ ಮಾಡುವ ಋಷಿವೃಂದವೆ, ಋಷಿ ಕುಲಕ್ಕೆ ಕಲಂಕವನ್ನು ಹಚ್ಚುವ ಶುಕ್ರಾಚಾರ್ಯನನ್ನು ಯಾರೂ ಸನಿಯಕ್ಕೆ ಕರೆಯಬೇಡಿರಿ !

**ಸೇನಾಪತಿ**

-ಗುರುವರ್ಯರು ಎದೆಗುಂದದೆ— ಧೈರ್ಯವಾಗಿ ಎದೆ ತಟ್ಟಿ ನಿಲ್ಲಬೇಕು.

**ಶುಕ್ರಾಚಾರ್ಯ**

—ಸೇನಾಪತಿಗಳೆ, ಇನ್ನೆಲ್ಲಿಯ ಧೈರ್ಯ? ಅಧಿರಾಜ, ವಿವೇಕ ಭ್ರಷ್ಟ, ಶೀಲಭ್ರಷ್ಟ, ಮತ್ತು ಮತಿಭ್ರಷ್ಟನಾದ ಈ ಶುಕ್ರಾ ಚಾರ್ಯನು ವ್ಯಸನದಿಂದ ದೂರಾಗಿ, ನಿಮ್ಮೆಲ್ಲರ ಕಲ್ಯಾಣ ಕ್ಕಾಗಿ ಟೊಂಕಕಟ್ಟಿ ನಿಲ್ಲಬೇಕೆಂದು ನಿಮ್ಮೆಲ್ಲರ ಅಪೇಕ್ಷೆಯಿದ್ದಲ್ಲಿ—ಈ ಮದಿರೆಯನ್ನು ಮೊದಲು ನನ್ನ ಕಣ್ಣೆದುರಿನಿಂದ ಮರೆಮಾಡಿರಿ ! ನನ್ನೆದುರು ಅದು ಬರದಂತೆ, ತರದಂತೆ ವ್ಯವಸ್ಥೆ ಮಾಡಿರಿ !

**ವೃಷಪರ್ವ**

—ಯುವರಾಜ, ಮದಿರೋತ್ಸವವನ್ನು ನಿಲ್ಲಿಸಲೆಂದು ಮಂತ್ರಿ ವರ್ಯರಿಗೆ ಹೇಳು !

**ಯುವರಾಜ**

—ಹಾಗೇ ಆಗಲಿ ಮಹಾರಾಜ! (ನಮಸ್ಕರಿಸಿ ಹೋಗುವನು)

**ಶುಕ್ರಾಚಾರ್ಯ**

—ರಾಜಾ .. ಮದಿರೆಯ ಸಂಪೂರ್ಣ ನಾಶದ ನಂತರವೆ ನನ್ನ ದರ್ಶನಕ್ಕೆ ಬಾ! ದೇವತೆಗಳ ಕುಟಿಲ ಕಾರಸ್ಥಾನದಿಂದ.... ಕಚನು ನನ್ನಿಂದ ಸಂಜೀವಿನಿ ವಿದ್ಯೆಯನ್ನು ಹರಣಮಾಡಿದರೂ... ಇಂಥ ಪರಿಸ್ಥಿತಿಯಲ್ಲಿ ಕೂಡ ನೀವು ಸುಖವಾಗಿರುವಂತೆ ದಾರಿತೋರಿಸಲು.... ಈ ಶುಕ್ರಾಚಾರ್ಯನು ಸಿದ್ಧನಿರುವನು. ಹೋಗು ರಾಜಾ ....! ಚಿಂತಿಸದಿರು ...! ಆದಷ್ಟು ಬೇಗ ನಾನು ಹೇಳಿದ್ದನ್ನು ಕಾರ್ಯರೂಪದಲ್ಲಿ ತರುವುದಕ್ಕೆ ಪ್ರಯತ್ನಿಸು.

**ಸೇನಾಪತಿ**

—ಗುರುರಾಜ.... ಇದು ನಮ್ಮ ಪರಂಪರೆಗೆ ವಿರುದ್ಧವಾಗುವದಿಲ್ಲವೆ?

**ಶುಕ್ರಾಚಾರ್ಯ**

—ಸೇನಾಪತಿಗಳೆ, ಮದಿರೆಯಿಂದಾದ ನಮ್ಮ ಅಧ:ಪತನವು ಕಡಿಮೆಯಿದೆಯೇ? ಇದು ನಮ್ಮ ಪರಂಪರೆಗೆ ವಿರುದ್ಧವಾಗಿ ಎಂದಿಗೂ ಆಗದು ನೀವುಗಳು ಈ ರೀತಿಯಾಗಿ ಮಾಡದಿದ್ದರೆ ನನ್ನಲ್ಲಿ ಪುನ: ತಪಶ್ಚರ್ಯವನ್ನು ಮಾಡುವ ಸಾಮರ್ಥ್ಯ ಉಳಿಯಲಿಕ್ಕಿಲ್ಲ. ಆದ್ದರಿಂದ....

**ವೃಷಪರ್ವ**

—ಮದಿರೆಯನ್ನು ರಾಜ್ಯದಲ್ಲಿಂದ ಹೊರಕ್ಕಟ್ಟುವುದೆ?

**ಶುಕ್ರಾಚಾರ್ಯ**

—ಹೌದು! ರಾಜಾ, ಇನ್ನೂ ಲಕ್ಷಗೊಟ್ಟು ಕೇಳು, ನಿನ್ನ ರಾಜ್ಯದಲ್ಲಿ ವಿದ್ಯಾರ್ಥಿಯಿರಲಿ; ಸೈನಿಕನಿರಲಿ, ಧನಿಕನಿರಲಿ, ಸೇನಾಪತಿಯಿರಲಿ, ಬಡವನಿರಲಿ ಮತ್ತು ಕಲಾವಂತನಿರಲಿ....

ಯಾರೇ ಇದ್ದರೂ ಅವರು ಮದಿರೆಯ ಆಧೀನರಾದುದನ್ನು ಕಂಡಾಕ್ಷಣ ಅವರನ್ನು ನಿನ್ನ ರಾಜ್ಯದಲ್ಲಿಂದ ಹೊರಗೆ ಹಾಕು. ಇಲ್ಲವೆ.... ದೇಹಾಂತ ಶಿಕ್ಷೆಯು ವಿಧಿಸಲ್ಪಡುವದೆಂದು ಡಂಗುರ ಸಾರಿಹೇಳು! ಈ ರೀತಿಯ ರಾಜಾಜ್ಞೆಯನ್ನು ನಿನ್ನ ರಾಜ್ಯದ ಮೂಲೆ ಮೂಲೆಗಳಲ್ಲಿ ಆದಷ್ಟು ಬೇಗ ಹೊರಡಿಸು.

**ವೃಷಪರ್ವ**

—ಆಜ್ಞೆ ಗುರುದೇವ....! (ವೃಷಪರ್ವ, ಸೇನಾಪತಿ ಹೋಗುವರು)

**ಶುಕ್ರಾಚಾರ್ಯ**

—(ತುಸು ತಡೆದು] ಹೌದು...ನಿಶ್ಚಯವಾಗಿ ನನಗೆ ತಿರುಗಿ ತಪಸನ್ನು ಆಚರಿಸಲೆಬೇಕು. ಆದರೆ ದೇವಯಾನಿ, ತ್ರೈಲೋಕ ದಲ್ಲಿ ಕುಡಕನೆಂದು, ವೈರಿಗಳಿಗೆ ಯಶವನ್ನು ಸಂಪಾದಿಸಿ ಕೊಟ್ಟು, ಸ್ವಂತದ ನಾಶವನ್ನು ಮಾಡಿಕೊಂಡ ಆತ್ಮಘಾತಕಿ ಯೆಂದು, ಸ್ವಜನರ ದ್ರೋಹವನ್ನು ಬಗೆದ ದ್ರೋಹಿಯೆಂದು, ಕಠಿಣ ತಪಶ್ಚರ್ಯವನ್ನಾಚರಿಸಿ ಕೊನೆಗೆ ವ್ಯಸನಾಧೀನನಾದ ಕರ್ಮಯೋಗಿಯೆಂದು...., ಮತ್ತು ಕೃತಘ್ನನೆಂದು—ಇಂಪು, ಮುಂದಿನ ಕಾಲದಲ್ಲಿ ಸಾರಲ್ಪಡುವ ಅಪಕೀರ್ತಿಯನ್ನು ನಾನು ಹೇಗೆ ತಡೆಯಲಿ?

**ದೇವಯಾನಿ**

— ಹಾಗೇನೂ ತಾವು ಭಾವಿಸಲಾರದು. ತಿರುಗಿ ನೀವು ತಪಶ್ಚರ್ಯವನ್ನು ಆರಂಭಿಸಿರಿ. ಅಂದರೆ ನಿಮಗುಂಟಾದ ಅಪಕೀರ್ತಿಯು ತಾನಾಗಿಯೆ ಹೊರಟುಹೋಗುವದು.

**ಶುಕ್ರಾಚಾರ್ಯ**

— ದೇವಯಾನಿ, ಜಗತ್ತಿನ ರೂಢಿಯೆ ಬೇರೆಯಾಗಿರುವದು.

ರಸಾತಳಕ್ಕೆ ಹೋಗಿದ್ದವನನ್ನು ಯಾರೂ ಮೇಲಕ್ಕೆ ಎತ್ತುವ ದಿಲ್ಲ.! ಎಲ್ಲರೂ ಹಾಸ್ಯಮಾಡುವವರೆ . !

ದೇವಯಾನಿ

— ತಾತ....? ಇಷ್ಟೊಂದು ಸಿಟ್ಟಾಗಿ ನೊಂದಬೇಡಿರಿ. ಕಚ ದೇವರಿಗೆ ಸಂಜೀವಿನಿ ವಿದ್ಯೆಯನ್ನು ಕೊಡುವದರ ನಿಶ್ಚಯ ವನ್ನು ಮಾಡಿ ಸಂಜೀವಿನಿ ಮಂತ್ರದ ಜಪವನ್ನು ಮಾಡಿರಿ! ಅಂದರೆ ಕಚದೇವರು ಜೀವಂತರಾಗಬಹುದು.

ಶುಕ್ರಾಚಾರ್ಯ

—ಆಗದಿರಲು! ಇವನ್ನು ನಾನು ಬಲ್ಲೆನು, ಹಾಗಾದರೆ ವಿಧಿಯೆ? ಎಲ್ಲರಿಗೂ ಬುದ್ಧಿಯನ್ನು ಹೇಳುವ ಶುಕ್ರಾಚಾರ್ಯನು ಎರಡನೆ ಯವರಿಂದ—ಬುದ್ಧಿಯ ಮಾತುಗಳನ್ನು ಕೇಳಿಕೊಳ್ಳುವ ಬಾರಿ ಬರಬೇಕೆ? ಮದಿರೆ ಕುಡಿಕುಡಿದು ಇಷ್ಟೊಂದು ನನ್ನ ಬುದ್ಧಿ ಮಂಕಾಗಿ ಹೋಯಿತೆ? ಇದೆಂಥ ಅವನತಿ ನನ್ನದು? ಎಂತಹ ದುರವಸ್ಥೆ .. ಎಂತಹ ಅಪಮಾನ!

ದೇವಯಾನಿ

—ಸೈರಣೆ ...ಅಪ್ಪಾಜಿ .. ಸೈರಣೆ.

ಶುಕ್ರಾಚಾರ್ಯ

—ಇನ್ನೆಲ್ಲಿಯ ಸೈರಣೆ? ಇನ್ನೆಲ್ಲಿಯ ಸೈರಣೆ! ಸೈರಣೆ—ತಾಳ್ಮೆಗಳ—ಎಲ್ಲೆಯೂ ಮೀರಿಹೋಗಿರುವವು! ಹೇಳು ದೇವಯಾನಿ ಹೇಳು... ಅಜಿಂಕ್ಯನಾದ ಶುಕ್ರಾಚಾರ್ಯನು ಮಣ್ಣುಗೂಡುವ ಸಮಯವು ಬಂದರೂ ಸೈರಣೆಯೆ? ತಾಳ್ಮೆಯು?

ದೇವಯಾನಿ

—ಹಣ್ಣಾದ ಜೀವವನ್ನು ಹೀಗೆ ಹಲುಬಿಸಿ ಮತ್ತಿಷ್ಟು ಹಣ್ಣು ಮಾಡಿಕೊಳ್ಳಬೇಡಿರಿ! ನೀವು ಕಚನನ್ನು ಜೀವಂತ ಮಾಡಿದ ಬಳಿಕ...

ಶುಕ್ರಾಚಾರ್ಯ

—ದೇವಯಾನಿ, ಕಚನೆಂಬ ನಮ್ಮಿನ ಮನೆಯಲ್ಲಿ ಅಡಗಿದ ಸರ್ಪದಂತಿದ್ದಾನೆ. ಈತನ ರೂಪಕ್ಕೆ ನೀನು ಮನಸೋತಿರಬಾರದು ...! ಅವನ ಸವಿಮಾತುಗಳಿಗೆ ಮರುಳಾಗಿರಬಾರದು ಸ್ವಾರ್ಥಸಾಧಿಸುವವರೆಗೆ ಎಲ್ಲರೂ ಸವಿಯಾಗಿಯೆ ಮಾತಾಡುವರು. ಸಂಜೀವಿನಿ ವಿದ್ಯೆಯ ಪ್ರಾಪ್ತಿಯ ನಂತರ ಕಚನ ನಿಜಸ್ವರೂಪವು ಕಾಣುವದಾಗಿ ತೋರಬಹುದು ಅವನ ವಾಣಿಯು ಕರ್ಕಶವಾಗಿ ತೋರುವುದು... ನಿನಗೆ!

ದೇವಯಾನಿ

—ಇಲ್ಲ.. ಇಲ್ಲ....ಅಪ್ಪಾಜಿ ! ಕಚದೇವರು ಹಾಗೆಂದಿಗೂ ಮಾಡಲಿಕ್ಕಿಲ್ಲ...! ನಿಶ್ಚಯವಾಗಿ ಮಾಡಲಿಕ್ಕಿಲ್ಲ....!

ಶುಕ್ರಾಚಾರ್ಯ

—ದೇವಯಾನಿ, ಮಗು- ಇದನ್ನು ನೀನು ಮಾತಾಡುತ್ತಿರುವದಿಲ್ಲ. ಕಚನ ಮೇಲೆ ಇರುವ ಪ್ರೇಮವು ನಿನ್ನಿಂದ ಮಾತಾಡಿಸುತ್ತಿದೆ. ಅವನಿಂದ ಜೀವಂತನಾಗುವದರ ಬದಲು.... ಮೃತನಾಗಿ ಹೋಗುವದೇ ಒಳಿತೆಂದು ನಾನು ನಿರ್ಧರಿಸಿದ್ದೇನೆ.

ದೇವಯಾನಿ

—(ಬದರಿ) ಅಪ್ಪಾಜಿ....(ದೈನ್ಯದಿಂದ) ಅಪ್ಪಾಜಿ....ಇದೇನು? ಹೀಗೇಕೆ ಮಾಡುವಿರಿ! ಕಚದೇವರ ವಿಷಯವಾಗಿ ನೀವು ತಪ್ಪು ಕಲ್ಪನೆ ಮಾಡಿಕೊಂಡಿರುವಿರಿ! ನೀವು ಗ್ರಹಿಕೆಮಾಡಿಕೊಂಡಂತೆ ಅವನಿಲ್ಲ....!

ಶುಕ್ರಾಚಾರ್ಯ

—ಕಚನ ಮೇಲಿರುವ ಪ್ರೇಮದಿಂದ ನೀನು ಕುರುಡಳಾಗಿರುವಿ! ನಿನ್ನ ಅಂತಃಕರಣವು ಬಧಿರವಾಗಿರುವದು. ಆದ್ದರಿಂದ

ಉಳಿದ ಭಾವನೆಗಳಿಗೆ ನಿನ್ನ ಹೃದಯದಲ್ಲಿ ಸ್ಥಾನವು ದೊರೆ ಯುವದಿಲ್ಲ.

**ದೇವಯಾನಿ**

—ಹಾಗೆ ತಾವು ಭಾವಿಸಬಾರದು.

**ಶುಕ್ರಾಚಾರ್ಯ**

—ದೇವಯಾನಿ, ಅಭಿಮಾನವೆ ಅಲಂಕಾರವೆಂದು ಭಾವಿಸುವ ಈ ಶುಕ್ರಾಚಾರ್ಯನಿಗೆ ಶತ್ರುವಿನ ಎದುರಲ್ಲಿ ಮುಖ ತಗ್ಗಿ ಸುವ.... ಬಾರಿ ಕೊನೆಗೆ ಬಂದಿತಲ್ಲವೆ? ಈ ಶರೀರದಲ್ಲಿ ಉಸಿ ರಿರುವವರೆಗೆ ನಾನೆಂದಿಗೂ ನನ್ನ ಶಿರವನ್ನು ಶತ್ರುಗಳ ಎದು ರಲ್ಲಿ ಬಗ್ಗಿಸಲಿಕ್ಕಿಲ್ಲ...! ನಿನ್ನ ಮಾತುಗಳನ್ನು ಕೇಳುವಷ್ಟು ನನ್ನ ಬುದ್ಧಿ ಭ್ರಂಶವಾಗಿಲ್ಲ! ದೇವಯಾನಿ, ನನ್ನ ಜೀವದ ಜೀವ ವಾದ, ನನ್ನ ಸರ್ವಸ್ವವಾದ ನಿನ್ನನ್ನು, ಶತ್ರುವಿನ ಮಗನಿಗೆ ಕೊಟ್ಟು ದೇವೇಂದ್ರನ ಸ್ನೇಹವನ್ನು ಸಂಪಾದಿಸಲೆ ನಾನು? ಇಲ್ಲ....ಇದನ್ನು ಎಂದಿಗೂ ಮಾಡಲಿಕ್ಕಿಲ್ಲ ನಾನು! ಸೂರ್ಯ ಚಂದ್ರರು ಇರುವವರೆಗೆ ಇದು ಶಕ್ಯವಿಲ್ಲ.

**ದೇವಯಾನಿ**

—ತಾತ, ಸುಮ್ಮನೆ ಕೋಪಗೊಳ್ಳಬೇಡಿರಿ! ಪರಿಸ್ಥಿತಿಯ ಗಂಭೀರತೆಯ ಕಡೆಗೆ ಲಕ್ಷ್ಯಗೊಡಿರಿ! ನಾನು ಹೇಳಿದಂತೆ ಮಾಡಿರಿ ...! (ಭುಜದ ಮೇಲೆ ಕೈಯಿಡುತ್ತ)

**ಶುಕ್ರಾಚಾರ್ಯ**

—ಸರಿ ದೂರ! ನನ್ನ ಸಮೀಪಕ್ಕೆ ಕೂಡ ಬರಬೇಡ....! ನೀನು ಹೇಳಿದಂತೆ ಮಾಡಿ ನನ್ನ ಸರ್ವಸ್ವದ ನಾಶವನ್ನು ಮಾಡಿ ಕೊಳ್ಳಲಾ? ಮುಖಕ್ಕೆ ಕಪ್ಪು ಹಚ್ಚಿ ಕೊಳ್ಳಲಾ? ವೈರಿಯಾದ ಬೃಹಸ್ಪತಿಯ ದಾಸನಾಗಿ ನನ್ನ ಜೀವನವನ್ನು ನೂಕಲಾ?

ಇದೆಲ್ಲವನ್ನು ಆನಂದದಿಂದ ನೋಡುವುದಕ್ಕೆ ನೀನು ಸಿದ್ಧಳಿರುವಿಯಲ್ಲವೆ? ನಿನ್ನ ಮಾತುಗಳ ಪರಿಣಾಮವು ನನ್ನ ಮನಸ್ಸಿನ ಮೇಲೆಂದಿಗೂ ಆಗಲಿಕ್ಕಿಲ್ಲ! ನನ್ನ ದುಃಖದ ಕಡೆಗೆ ನಿನ್ನ ಲಕ್ಷವಿಲ್ಲ! ಮಾನಭಂಗದ ಕಡೆಗೆ ಲಕ್ಷವಿಲ್ಲ....! ನೀನು ನಿನ್ನ ಸುಖದಲ್ಲಿ ಮಗ್ನಳಾಗಿರುವಿ! ಕಚನ ಎದುರಲ್ಲಿ ನೀನು ನನಗೆ ಬೆಲೆಯನ್ನು ಕೊಡುವದಿಲ್ಲ. ಮದುವೆಯಾದ ಬಳಿಕ ತಂದೆ-ತಾಯಿಗಳ ಸಂಬಂಧಸೂತ್ರವನ್ನು ಹರಿದು ಬೀಸಾಡುವದು ಸ್ತ್ರೀಯ ಸ್ವಭಾವ!

**ದೇವಯಾನಿ**

—ಅಪ್ಪಾಜಿ, ಹಾಗೆ ತಾವೆಂದಿಗೂ ಭಾವಿಸಬಾರದು! ಜನ್ಮವನ್ನಿತ್ತು ಲಾಲನೆ-ಪಾಲನೆ ಮಾಡಿದ ನಿಮ್ಮ ವಿರುದ್ಧವಾಗಿ ನಿಮ್ಮ ಮಗಳು ಎಂದಿಗೂ ವರ್ತಿಸಲಿಕ್ಕಿಲ್ಲ. ಆದರೆ....ಅಪ್ಪಾಜಿ ....ಇದುವರೆಗೆ ಹೇಳದೆ ಇದ್ದ ಸಂಗತಿಯೊಂದನ್ನು ಇಂದು ನಿಮ್ಮ ಮುಂದೆ ಹೇಳುತ್ತೇನೆ. ನನಗೆ ತಿಳಿಯದಲೆ ಯೌವನವು ನನ್ನ ಹೃದಯ ಮನಸ್ಸುಗಳನ್ನು ಕಚನ ಸ್ವಾಧೀನ ಮಾಡಿರುವದು.

**ಶುಕ್ರಾಚಾರ್ಯ**

—ನನ್ನಂತೆಯೇ ನೀನೂ ಹಾಳಾದೆಯಲ್ಲವೆ? (ದುಃಖದಿಂದ) ದೇವಯಾನಿ, ನೀನೂ ಹಾಳಾದೆಯಾ?

**ದೇವಯಾನಿ**

—ಅಪ್ಪಾಜಿ....ಅಪ್ಪಾಜಿ.... (ಶುಕ್ರಾಚಾರ್ಯನನ್ನು ಅಪ್ಪಿಕೊಂಡು ಅಳುವಳು)

**ಶುಕ್ರಾಚಾರ್ಯ**

—(ಗದ್ಗತ ಕಂಠದಿಂದ) ಅಳಲದಿರು ....ಅಳಲದಿರು ಕಂದಾ!

ಆಕಾಶವೆ ಹರಿದು ಬಿದ್ದಾಗ ಕತ್ತಿಪರೂ ಪ್ರಯೋಜನವೇನು? ಕಣ್ಣೀರುಗಳು ಎಷ್ಟೇ ಪವಿತ್ರವಾದರೂ ದುಃಖವನ್ನು ಶಾಂತ ಮಾಡಲು ಸಮರ್ಥವಾಗುವದಿಲ್ಲ. ನಾವು ವೈಭವದಲ್ಲಿದ್ದಾಗ ವಿಜಯಧ್ವಜವು ನಮ್ಮ ಪತಾಕೆಯೆಂದು ಫಡಫಡಿಸುತ್ತಿದ್ದಾಗ ನಾನು ನಿನ್ನ ಪ್ರೇಮದ ಮಹತ್ವವನ್ನರಿತು ಕಚನಿಗೆ ನಿನ್ನನ್ನು ಧಾರೆಯೆರೆದು ಕೊಡಬಹುದಾಗಿದ್ದಿತು ಆದರೆ ಮಗು ಮದಿರೆಯ ಬೆನ್ನುಹತ್ತಿ ನಾನು ಎಲ್ಲರ ನಾಶವನ್ನು ಮಾಡಿದೆ. ಅನುಯಾಯಿಗಳ ನಾಶವನ್ನು ಒಂದೆಡೆಗೆ ನೋಡುತ್ತಿದ್ದರೆ ಮತ್ತೊಂದೆಡೆಯಲ್ಲಿ ಪವಿತ್ರವಾದ ನಿನ್ನ ಪ್ರೇಮವು ವಿಷದಲ್ಲಿ ಬೆರೆಯುತ್ತಿರುವದನ್ನು ನನಗೆ ನೋಡಬೇಕಾಗುತ್ತಿರುವದು. ದೇವಯಾನಿ.... ಇನ್ನು ಮುಂದೆ... ಅಪ್ಪಾಜಿಯೆಂದು ನನ್ನನ್ನು ಕರೆಯಬೇಡ. ನಿಮ್ಮೆಲ್ಲರ ದುಃಖದ ಪರಿಹಾರಾರ್ಥವಾಗಿ ಮಾಡುವ ಯಜ್ಞದಲ್ಲಿ ನಾನು ನನ್ನ ಜೀವನದ ಪ್ರಥಮಾಹುತಿಯನ್ನು ಕೊಡುವದನ್ನು ನಿರ್ಧರಿಸಿರುವೆನು.

**ದೇವಯಾನಿ**

—ಹೀಗೆ ಅಧೀರವಾಗಿ ನಡೆಯುವದೆಂತು? ತೊಂದರೆಗಳು ಒಂದರ ಹಿಂದೊಂದು ಬರುವವು. ಅಪ್ಪಾಜಿ, ಧೈರ್ಯ, ಸ್ಥೈರ್ಯ ಶೌರ್ಯ ಮತ್ತು ಸಾಹಸಗಳ ನೆಲೆಯಾದ ನೀವು ಧೈರ್ಯಗೆಡುವುದೇ? ಇಂಥ ಸಂಕಟವಲ್ಲಿಂದಲೆ ನಮಗೆ ಮಾರ್ಗವನ್ನು ತೆಗೆಯಬೇಕಾಗಿರುವದು.

**ಶುಕ್ರಾಚಾರ್ಯರು**

—ಹೌದು! ಕಂದಾ... ಹೌದು! ನೀನನ್ನುವದು ಸತ್ಯವಿದೆ. ಗತಕಾಲದಲ್ಲಿ ನಡೆದು ಹೋದ ಒಂದೊಂದು ದೃಶ್ಯಗಳು ನನ್ನ

ಕಣ್ಣೆದುರಿನಲ್ಲಿ ನಿಂತು ನನ್ನನ್ನು ನನ್ನ ಕರ್ತವ್ಯ ಪಥದಿಂದ ದೂರುಮಾಡುತ್ತಿರುವವು. ಆದ್ದರಿಂದ ನಾನು ಧೈರ್ಯಗೆಡು ತ್ತಿರುವೆನು.

ದೇವಯಾನಿ

—ನಾನು ಹೇಳಿದಂತೆ ಮಾಡಿದರೆ ನೀವು ಈ ಸಂಕಟದಲ್ಲಿಂದ ಸುಲಭವಾಗಿ ಪಾರಾಗಬಹುದು.

ಶುಕ್ರಾಚಾರ್ಯ

—(ನಿರಾಶೆಯಿಂದ) ದೇವಯಾನಿ, ನೀನು ಹೇಳಿದಂತೆ ಕೇಳು ವುದಕ್ಕೆ ನಾನು ಸಿದ್ಧನಿದ್ದೇನೆ ಆದರೆ ಒಂದು ಮಾತನ್ನು ನೀನು ನಡಿಯಿಸಬೇಕು.

ದೇವಯಾನಿ

—ಹೇಳಿ... ಯಾವ ಮಾತನ್ನು ನಾನು ನಡೆಯಿಸಬೇಕು.

ಶುಕ್ರಾಚಾರ್ಯ

—ಕಚನು ಜೀವಂತನಾದ ಬಳಿಕ ನನ್ನ ಸಮ್ಮತಿಯನ್ನು ಪಡೆಯದೆಯೆ ಆತನ ಸಂಗಡ ದೇವಲೋಕಕ್ಕೆ ನೀನು ಹೊರಟು ಹೋಗಕೂಡದು.

ದೇವಯಾನಿ

—ಇಲ್ಲ! ನಿಮ್ಮ ಅಪ್ಪಣೆಯಿಲ್ಲದೆ ಒಂದು ಹೆಜ್ಜೆಯನ್ನು ಕೂಡ ಮುಂದಿಡುವುದಿಲ್ಲ ನಾನು! ನಿಮ್ಮ ಪಾದದಾಣೆಯಾಗಿ ಹೇಳು ವೆನು.

ಶುಕ್ರಾಚಾರ್ಯ

—ಒಂದು ವೇಳೆ ನೀನು ಹೋದರೆ ನಿನ್ನ ಸಂಸಾರದ ಜೊತೆ ಯಲ್ಲಿ, ನನ್ನ ನೆನವು ನಿನಗೆ ಕ್ಷಣಕ್ಷಣಕ್ಕೆ ಆಗಿ ನಿನ್ನ ಸಂಸಾರವೆಂದಿಗೂ ಸುಖಕರವಾಗಿ ಆಗಲಾರದು. ಮತ್ತು

ವನ್ನು ಮಾಡುವದಕ್ಕೆ ನನ್ನ ಮನಸ್ಸು ಸ್ಫುರಣಹೊಂದುತ್ತಿರುವದು. ಕಂದಾ, ಪಾರ್ವತೀಪರಮೇಶ್ವರರನ್ನು ಏಕ ಮನಸ್ಸಿನಿಂದ ಜಪಿಸು. ನಿನ್ನ ಕಚನು ಜೀವಂತನಾದನೆಂದು ತಿಳಿ!

(ಶುಕ್ರಾಚಾರ್ಯರು ಹೋಗುವರು- ದೇವಯಾನಿ ಪಾರ್ವತಿಪರಮೇಶ್ವರರ ಜಪವನ್ನು ಆರಂಭಿಸುವಳು.)

ದೇವಯಾನಿ

—ಗಿರಿಜಾದೇವಿ...! ತಂದೆಯವರ ಸಂಜೀವಿನಿ ಮಂತ್ರದ ಪ್ರಭಾವದಿಂದ ಕಚದೇವರು ಜೀವಂತರಾಗಲಿ! (ಸ್ವಲ್ಪ ತಡೆದು ಅಕ್ಕಾಜಿ ಎಂಬ ಸದ್ದು ಕೇಳಿಸುವದು.) ಯಾರವರು? (ಕಣ್ದೆರೆದು) ಯಾರು...ಕರೆಯುತ್ತಿದ್ದಾರೆ? ( ಪುನಃ ಅಕ್ಕಾಜಿ ಶಬ್ದ) ಯಾರು ನನ್ನನ್ನು ಕರೆಯುತ್ತಿದ್ದಾರೆ (ಅಕ್ಕಾಜಿ) ಕರಿಯುವವರು ಎದುರೇಕೆ ಬರುವುದಿಲ್ಲ....? (ಕಚನು ಪ್ರವೇಶಿಸುವನು)

ಕಚ

—ಅಕ್ಕಾಜಿ ...

ದೇವಯಾನಿ

—(ಆಶ್ಚರ್ಯದಿಂದ) ನೀವು ಅಕ್ಕಾಜಿಯೆಂದು ಕರೆಯುತ್ತಿದ್ದಿರಾ?

ಕಚ

—ಹೌದು ಅಕ್ಕಾಜಿ....

ದೇವಯಾನಿ

—[ನಿರಾಶೆಯಿಂದ] ನೀವು ಪುನರ್ಜನ್ಮವನ್ನು ಹೊಂದಿದ

ನಂತರ ಅಪ್ಪಾಜಿಯವರಿಗೆ ನಾಲ್ಕು ಮಾತುಗಳನ್ನು ಹೇಳಿ, ನನ್ನನ್ನು ವಚನದಿಂದ.... ಮುಕ್ತಳನ್ನಾಗಿ ಮಾಡೀರೆಂದು ಭಾವಿಸಿದ್ದೆ! ಆದರೆ....

ಕಚ

—ಅಕ್ಕಾಜಿ, ಹಾಗೆ ಏನಾದರೊಂದು ಅನ್ನಬೇಡ.

ದೇವಯಾನಿ

—(ಅಸಹ್ಯಗೊಂಡು) ಅಕ್ಕಾಜಿ... ಅಕ್ಕಾಜಿ ....! ಅಕ್ಕಾಜಿಯೆಂದು ನನ್ನನ್ನು ಕರೆಯಬೇಡಿರಿ. ಮೊದಲು ಕರೆಯುತ್ತಿದ್ದಂತೆಯೇ ಕರಿಯಿರಿ! ಅಕ್ಕಾಜಿಯೆಂದು ದಯವಿಟ್ಟು ಕರೆಯಬೇಡಿರಿ!

ಕಚ

—ನಾನು ಪುನರ್ಜನ್ಮವನ್ನು ತಾಳಿದ ಕಚನಿದ್ದೇನೆ, ಹಿಂದೆ ಆಗಿದ್ದೆಲ್ಲವೂ ಹೋದ ಜನ್ಮದಲ್ಲಿ ಆಗಿರುವದು. ಅದರ ನೆನವನ್ನಾದರೂ ನಾವು ಏತಕ್ಕಾಗಿ ಮಾಡಿಕೊಳ್ಳಬೇಕು ಅಪ್ಪಾಜಿಯವರ ಜೊತೆಯಲ್ಲಿ ಆದ ನಿಮ್ಮ ಸಂಭಾಷಣೆಯನ್ನು ಅವರ ಹೊಟ್ಟೆಯಲ್ಲಿ ನಾನಿದ್ದಾಗ ಕೇಳಿರುವೆನು. ಅಂದಮೇಲೆ ನೀವು ನನ್ನ ಅಕ್ಕಾಜಿಯಲ್ಲವೆ?

ದೇವಯಾನಿ

—ಕಚದೇವಾ.... ವಿಚಾರಮಾಡಿ ನೋಡಿರಿ! ನನಗಿಂತಲೂ ವಯಸ್ಸಿನಿಂದ ಹಿರಿಯರು ನೀವು! ನೀವನ್ನುವಂತೆ ನಾನು ನಿಮ್ಮ ಅಕ್ಕಾಜಿ ಹೇಗೆ ಆಗುವೆನು? ಮೇಲಾಗಿ ನಾನು ಹುಟ್ಟಿದಂತೆ ನೀವೇನೂ ನನ್ನ ತಂದೆಯವರ ರಕ್ತ ಮಾಂಸದಿಂದ ಹುಟ್ಟಿಲ್ಲ. ನನ್ನನ್ನು ಹಡೆದ ತಾಯಿಯು ನನ್ನಂತೆ ನಿಮ್ಮನ್ನು ಒಂಬತ್ತು ತಿಂಗಳು ಹೊತ್ತು ಹಡೆದಿಲ್ಲ. ಕೇವಲ

ಅಪ್ಪಾಜಿಯವರ ಸಂಜೀವಿನಿ ವಿದ್ಯೆಯ ಪ್ರಭಾವದಿಂದಲೆ ನಿಮ್ಮ ಪುನರ್ಜನ್ಮವಾಗಿರುವದು. ಅಂದಮೇಲೆ ಅಕ್ಕಾಜಿ ಯೆಂದು ಕರಿಯಲು ನಿಮಗೆ ಅಧಿಕಾರವಾದರೂ ಎಲ್ಲಿರುವದು?

ಕಚ

—ಅಕ್ಕಾಜಿ, ಅಪ್ಪಾಜಿಯವರಿಗೆ ಕೊಟ್ಟ ವಚನವನ್ನು ಮರೆ ತಿರೇನು?

ದೇವಯಾನಿ

—ಇಲ್ಲ! ಅದು ನನ್ನ ಜ್ಞಾಪಕದಲ್ಲಿರುವದು. ನೀವೆಲ್ಲವನ್ನೂ ಅರಿತವರಾಗಿರುವಿರಿ? ಆದ್ದರಿಂದ ಮೊದಲಿನಂತೆಯೆ ಪ್ರೀತಿಯಿಂದ ಕರೆಯಿರಿ.

ಕಚ

—(ನಿಶ್ಚಯದ ಸ್ವರದಲ್ಲಿ) ಇಲ್ಲ...! ಇಲ್ಲ... ಅಕ್ಕಾಜಿ....! ಇದು ನನ್ನಿಂದ ಎಂದಿಗೂ ಆಗದು! ನಾನು ಅಪ್ಪಾಜಿಯವ ರನ್ನು ಜೀವಂತ ಮಾಡಿ ಕೂಡಲೆ ನನಗೆ ದೇವ ಲೋಕಕ್ಕೆ ಹೋಗುವದಿದೆ.

ದೇವಯಾನಿ

—ದೇವಲೋಕಕ್ಕೆ ಇಷ್ಟೊಂದು ಶೀಘ್ರವಾಗಿ ಹೋಗುವ ಕಾರಣವಾದರೂ ಏನು ಕಚದೇವಾ....? ನನ್ನನ್ನು ಇಲ್ಲಿಯೇ ಬಿಟ್ಟು....

ಕಚ

—ಹೋಗುವವನಿದ್ದೇನೆ ನಾನು!

ದೇವಯಾನಿ

—ಅದೇಕೆ? ನನ್ನನ್ನೇಕೆ ಜೊತೆಯಲ್ಲಿ ಕರೆದುಕೊಂಡು ಹೋಗುವದಿಲ್ಲ.

ಕಚ

—ದೇವಯಾನಿ, ನಿನ್ನ ಕಣ್ಣಿನಿಂದ ಹರಿಯುವ ದುಃಖಾಶ್ರು ಗಳು ಹೊನಲಾಗಿ ಹರಿದು ಅವು ನನ್ನನ್ನು ಅಡ್ಡಗಟ್ಟಬಹು ದು! ನಿನ್ನ ಮೋಹದ ದೃಷ್ಟಿಯು ನನ್ನನ್ನು ಗಾಯಗೊಳಿಸಿ ನನ್ನ ಕರ್ತವ್ಯಪಥದಿಂದ ನನ್ನನ್ನು ದೂರಮಾಡಬಹುದು. ನಿನ್ನ ಮೃದುವಾದ ಮಾತುಗಳು ನನ್ನನ್ನು ಕರ್ತವ್ಯದಿಂದ ವಿಮುಖನನ್ನಾಗಿ ಮಾಡಬಹುದು. ಆದ್ದರಿಂದ........

ದೇವಯಾನಿ

—ಆದ್ದರಿಂದ....?

ಕಚ

—ನಿನ್ನನ್ನು ನಾನು ಜೊತೆಯಲ್ಲಿ ಕರೆದುಕೊಂಡು ಹೋಗು ವದಿಲ್ಲ.

ದೇವಯಾನಿ

— ಕಚದೇವಾ ...ಇದನ್ನು ಹೇಳಲು... ನೀವು ಅಂಜುತ್ತಿರುವಿ ರೇಕೆ? ನಿಮ್ಮ ಸ್ವರವು ಕಂಪಿಸುತ್ತಿರುವದೇಕೆ? ನಿಮ್ಮ ಶರೀರ ನಡುಗುತ್ತಿರುವುದೇಕೆ?

ಕಚ

—ಎಲ್ಲಿ ...? ಎಲ್ಲಿ ನಾನು ಅಂಜುತ್ತಿದ್ದೇನೆ?

ದೇವಯಾನಿ

—ಕಚದೇವಾ ಸ್ತ್ರೀಯರ ದೃಷ್ಟಿ ಕಟಾಕ್ಷದಲ್ಲಿಂದ ಪುರುಷರ ಯಾವ ಭಾವನೆಗಳೂ ಅಡಗಿಕೊಂಡು ನಿಲ್ಲಲಾರವು. ನಿಜ ಹೇಳಿರಿ ...ನನ್ನ ದೃಷ್ಟಿಗೆ—ದೃಷ್ಟಿಯನ್ನಿಟ್ಟು ನೋಡಲು, ಮಾತಾಡಲು....ನೀವು ಹೆದರುತ್ತಿರುವಿರೇಕೆ? ನನ್ನ ಕೋಮಲ ವಾದ ಶರೀರಕ್ಕೆ...ರೂಪಕ್ಕೆ ತಾವು ಇಷ್ಟೊಂದು ಮೋಹಿಸಿ

ರಾಸಿರೇಕೆ? ನನ್ನನ್ನು ಅಗಲಿ...ಒಂದು ನಿಮಿಷಕೂಡ ನೀವು ಇರಲಾರಿರಿ...! ಇದು ಏಕೆ?

ಕಚ

—ಏಕೆಂದರೆ ...

ದೇವಯಾನಿ

—ಏಕೆಂದರೆ...ನೀವು ನನ್ನನ್ನು ಪ್ರೀತಿಸುವಿರಿ! ಅಲ್ಲವೆ?

ಕಚ

—(ಗಡಬಡಿಸಿದ ಭಾವದಲ್ಲಿ) ಇಲ್ಲ... ! ಇಲ್ಲ....! ನಿನ್ನನ್ನು ನಾನು ಎಂದಿಗೂ ಪ್ರೀತಿಸುವದಿಲ್ಲ.

ದೇವಯಾನಿ

—(ಆವೇಶಪೂರಿತ ಸಿಟ್ಟಿನಿಂದ) ಇವನ್ನು ಹೇಳುವಾಗ ನಿಮ್ಮ ಸ್ವರವು ಕಂಪಿಸುತ್ತಿರುವದೇಕೆ? ನೀವು ನಿಜವಾಗಿ ನನ್ನನ್ನು ಅಕ್ಕಾಜಿಯೆಂದು ಭಾವಿಸಿದ್ದರೆ....ನನ್ನೆಡೆಗೆ ನೋಡುವುದಕ್ಕೆ ಹೆದರುವಿರೇಕೆ? ನಿಮ್ಮ ಭಾವನೆಯು ಪವಿತ್ರವಾಗಿದ್ದರೆ— ನನ್ನೆಡೆಗೆ ನೋಡಿರಿ! (ತುಸು ತಡೆದು) ನೋಡಲು ಹೆದರುತ್ತಿರುವಿರೇಕೆ? ಮೊದಲಿನಿಂದಲೂ ನೀವು ನನ್ನನ್ನು ನೋಡುವ ದೃಷ್ಟಿಯಲ್ಲಿ ಅಕ್ಕಾಜಿಯ ಭಾವನೆ ಇಲ್ಲದಿರುವಾಗ ಈಗೆಲ್ಲಿಂದ ಬರಬೇಕು? (ಕಚನ ಕೈಗಳನ್ನು ಕೈಯಲ್ಲಿ ತೆಗೆದುಕೊಂಡು, ಪ್ರೀತಿಸುವಿರಲ್ಲವೆ ನನ್ನನ್ನು?

ಕಚ

—ಅಕ್ಕಾಜಿ....ಇದೇನು....ಇದೇನು....ದೂರಕ್ಕೆ ಸರಿ! (ಕೈಗಳನ್ನು ಕೊಸರಿಕೊಳ್ಳುವನು)

ದೇವಯಾನಿ

—ಏಕೆ? ಹೇಳಿ....ಕಚದೇವಾ ಏಕೆ?

**ಕಚ**

—ಸಹೋದರನ ಜೊತೆಯಲ್ಲಿ ಶೃಂಗಾರದ ಆಟಗಳನ್ನಾಡುವದುಚಿತವಲ್ಲ!

**ದೇವಯಾನಿ**

—ಗುರುಪುತ್ರಿಯ ಜೊತೆಯಲ್ಲಿ ಶೃಂಗಾರದ ಆಟಗಳನ್ನಾಡುವದುಚಿತವೇ? ಕಚದೇವಾ....ನಿಮ್ಮ ಮುಖದಿಂದ....ಈ ಶಬ್ದಗಳೇ?

**ಕಚ**

—ಹೌದು! ದೇವಯಾನಿ ನೀನು ನನ್ನ ಅಕ್ಕಾಜಿ....! ಆದ್ದರಿಂದ....

**ದೇವಯಾನಿ**

—ಪ್ರೇಯಸಿ ದೇವಯಾನಿಯೆಂದು ನನ್ನನ್ನು ಕರೆಯುವದಕ್ಕೆ ನೀವು ಸಿದ್ಧರಿಲ್ಲ.

**ಕಚ**

—ಇಲ್ಲ.

**ದೇವಯಾನಿ**

—ಇಲ್ಲವೆ? ನಿಜ ಹೇಳಿರಿ....!

**ಕಚ**

—ಇಲ್ಲ...! ಎಂದಿಗೂ ಇಲ್ಲ!

**ದೇವಯಾನಿ**

—(ನಿರಾಶೆಯಿಂದ) ಕಚದೇವಾ...ಮೋಹದಿಂದ ಮತ್ತವಾದ ನನ್ನ ಬುದ್ಧಿ ಮನಸ್ಸುಗಳಿಗೆ ಏರಿದ ಮದವು ಇಳಿಯಿತು. ಪ್ರೇಮದಿಂದ ಕಣ್ಣುಗಳಿಗೆ ಬಂದ ಪರೆಯು ದೂರವಾಯಿತು. ಈಗ ನನಗೆ ನಿಚ್ಚಳವಾಗಿ ಎಲ್ಲವೂ ಕಾಣಿಸುತ್ತಿರುವದು. ಕಾರ್ಯ ಸಾಧನೆಯ ಕಡೆಗೆ ಲಕ್ಷವನ್ನಿಟ್ಟು..., ಉದ್ದೇಶ

ವನ್ನು ಸಾಧಿಸುವದಕ್ಕಾಗಿ ನೀನು ನನ್ನ ಸಂಗಡ ಪ್ರೇಮದ ನಟನೆಯನ್ನು ಮಾಡಿದೆ! ಎಷ್ಟಾದರೂ ನನ್ನದು ಹುಚ್ಚು ಜೀವ....! ಆದ್ದರಿಂದಲೆ ನಿನ್ನನ್ನು ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸಿತು. ಕಚದೇವಾ...ವಂಚನೆಯಿಂದ ನನ್ನ ತಂದೆಯು ವರಿಂದ ಸಂಜೀವನಿ ವಿದ್ಯೆಯ ಹರಣಮಾಡಿದೆ! ಅಪಹರಿಸಿದೆ! ನೀನು ಅದರ ಜಪವನ್ನು ಯಾವಾಗ ಜಪಿಸಲು ಹತ್ತಿ ವಿಯೋ ಆವಾಗ ನನ್ನ ಪ್ರೇಮವು ಅಡ್ಡಾಗಿನಿಂತು—ನಿನ್ನಿಂದ ಅದನ್ನು ಎಂದಿಗೂ ಜಪಿಸಗೊಡಲಿಕ್ಕಿಲ್ಲ ನನ್ನ ದುಃಖವು ಕೂಡ ನಿನ್ನ ಮತ್ತು ಸಂಜೀವಿನಿ ವಿದ್ಯೆಯ ನಡುವೆ ಕಲ್ಲು ಗೋಡೆಯಾಗಿ ನಿಲ್ಲಬಹುದು. ಆದ್ದರಿಂದ ಕಚದೇವಾ.... ಇನ್ನೊಮ್ಮೆ ಅಂಗಲಾಚಿ ಬೇಡಿಕೊಳ್ಳುವೆನು... ಮೊದಲಿನಂತೆ ನನ್ನ ಮೇಲೆ ಪ್ರೇಮಮಾಡಿರಿ! ಮತ್ತು ಮೃತರಾದ ಆಪ್ಪಾಜಿ ಯವರನ್ನು ಜೀವಂತ ಮಾಡಿರಿ!

**ಕಚ**

—(ಅಧೀರನಾಗಿ) ಹೌದು ನೀನನ್ನುವದು ನಿಜವಿದೆ. ನಿಮಿಷ ನಿಮಿಷಕ್ಕೆ ನಿನ್ನ ನೆನಹು ನನಗೆ ನಿಶ್ಚಯವಾಗಿ ಆಗ ಬಹುದು.

**ದೇವಯಾನಿ**

—ಆಗುವದಲ್ಲವೆ?

**ಕಚ**

—ಆಗಬಹುದು. ಆದ್ದರಿಂದಲೆ....ದೇವಲೋಕಕ್ಕೆ ಹೋದ ಕೂಡಲೆ...ಸಂಜೀವಿನಿ ಮಂತ್ರದ ಉಪದೇಶವನ್ನು ಎರಡನೆ ಯವರಿಗೆ ಮಾಡುವದನ್ನು ನಿರ್ಧರಿಸಿರುವೆನು.

**ದೇವಯಾನಿ**

—ಏಕೆ?

ಕಚ

—ನಿನ್ನ ಪ್ರೇಮ, ನಿನ್ನ ನೆನಹುಗಳು ಅಡ್ಡಾಗಿ [illegible] ನ್ನ ನ್ನು ನನ್ನ ಕರ್ತವ್ಯದಿಂದ ಚ್ಯುತನನ್ನಾಗಿ ಮಾಡಬಾರದೆಂಬ ಉದ್ದೇಶದಿಂದ....!

ದೀವಯಾನಿ

—ಕಚದೇವಾ....ಕಚದೇವಾ... ನನಗಿಂತಲೂ ನಿಮಗೆ ನಿಮ ಕರ್ತವ್ಯವೆ ಹೆಚ್ಚು ಪ್ರಿಯವಾಗಿ ತೋರುವುದಲ್ಲವೆ?

ಕಚ

—ಹೌದು.

ದೇವಯಾನಿ

—(ಸಿಟ್ಟಿನಿಂದ) ಹೌದೆಂದು ಹೇಳವುದಕ್ಕೆ ನಿಮ್ಮ ನಾಲಿಗೆ ಯಾದರೂ ಹೇಗೆ ಸಿದ್ಧವಾಗುವದು ತುಡುಗ, ಕಠೋರ ಪಾಪಿ ಮತ್ತು ಚಾಂಡಾಲರಂತೆ ಈ ಸಂಜೀವಿನಿ ವಿದ್ಯೆಯ ಉಪದೇಶವನ್ನು ನೀವು ಎರಡನೆಯವರಿಗೆ ಮಾಡುವಿರಾ? ಅದು ನೋಡಿರಿ, ನಿಮ್ಮ ಜನ್ಮದಿಂದ ನನ್ನ ತಂದೆಯವರು ಮೃತರಾಗಿ ಬಿದ್ದಿದ್ದಾರೆ. ಅವರನ್ನು ಜೀವಂತ ಮಾಡದೆಯೆ ದೇವಲೋಕಕ್ಕೆ ಹೊರಟು ಹೋಗುವಿರಾ?

ಕಚ

—ಇಲ್ಲ...! ಅವರನ್ನು ಈ ಪರಿಸ್ಥಿತಿಯಲ್ಲಿ ಬಿಟ್ಟು ನಾನೆಂದಿಗೂ ಹೋಗುವದಿಲ್ಲ ನಾನು ಸಂಜೀವಿನಿ ಮಂತ್ರ ವನ್ನು ಜಪಿಸಿ—ಅವರನ್ನು ಜೀವಂತ ಮಾಡಿದನಂತರವೆ ದೆ ವಲೋಕಕ್ಕೆ ಹೋಗುವೆನು

ಗೇವಯಾನಿ

—ಹಾಗಾದರೆ ಸಂಜೀವಿನಿ ವಿದ್ಯೆಯನ್ನು ಸ್ಮರಿಸಿರಿ! ಅವರ ಆಶೀರ್ವಾದ ಪಡೆಯಿರಿ!

ಕಚ

—(ಸ್ವಲ್ಪ ತಡೆದು ರಂಗಭೂಮಿಯ ಬದಿಗೆ ನೋಡುತ್ತ) ಗುರು ದೇವ ಆದೇಶ....

ಶುಕ್ರಾಚಾರ್ಯ

—(ಒಳಬದಿಯಿಂದ) ಯಾರು ನನಗೆ ಆದೇಶ ಕೊಡುತ್ತಿ ರುವರು?

ಕಚ

—ದೇವೇಂದ್ರನ ಅನುಯಾಯಿ ಮತ್ತು ನಿಮ್ಮ ಪಟ್ಟ ಶಿಷ್ಯ ನಾದ ಕಚ !

ಶುಕ್ರಾಚಾರ್ಯ

—ಕಚ! ತುಡುಗಿನಿಂದ ಸಂಜೀವಿನಿ ವಿದ್ಯೆಯನ್ನು ಹರಣ ಮಾಡಿದ ಕಳ್ಳ! ವಂಚನೆಯ ನೆಲೆಯಾದ ಮತ್ತು ಶತ್ರುವಿನ ಮಗನಾದ ನಿನ್ನನ್ನು ನಾನೆಂದಿಗೂ—ಆಶೀರ್ವದಿಸುವದಿಲ್ಲ. ಸುಳ್ಳು ಪ್ರೇಮದ ನಟನೆಯನ್ನು ಮಾಡಿ ನನ್ನ ಮಗಳ ಜೀವನವನ್ನು ಹಾಳುಮಾಡಿದ ವಂಚಕನು ನೀನು! ದೈತ್ಯರನ್ನ ಹಾಳುಮಾಡಲು ಹೊರಟ—ದಾನವ!ನೂರಸರಿ...! ನನ್ನ ಎದುರು ನಿಲ್ಲಬೇಡ....!ನಾನೆಂದಿಗೂ ನಿನ್ನನ್ನು ಪಟ್ಟಶಿಷ್ಯ ನೆಂದು ತಿಳಿದಿಲ್ಲ.

ಕಚ

—ಆದರೆ ಗುರುದೇವ....ನಾನು ತಿಳಿಯುತ್ತೇನೆ.

ಶುಕ್ರಾಚಾರ್ಯ

—ಬಲಾತ್ಕಾರಲ್ಲಿ ಪ್ರೇಮದ ಅಂಶ ಕೂಡ ಇರುವದಿಲ್ಲ.

ಕಚ

—ಆದರೆ ಗುರುದೇವ, ಇದು ಪ್ರೇಮದ ಬಲಾತ್ಕಾರವಿರುವದು.

**ಶುಕ್ರಾಚಾರ್ಯ**

—ವೈರಿಯ ಮಗನಾದರೂ ನನ್ನ ಅನುಯಾಯಿಯೆಂದು ಒಪ್ಪಿಕೊಂಡೆ! ನನ್ನ ಪಟ್ಟಶಿಷ್ಯನೆಂದು ಹೇಳಿದೆ! ಇದರಲ್ಲಿಯು ನನ್ನ ಜಯವಿರುವದು! ಕಚನೆ.. ದೈತ್ಯರ ಗುರುವಾದ ಶುಕ್ರಾಚಾರ್ಯನು ನಿನಗೆ ಆಶೀರ್ವದಿಸುತ್ತಾನೆ ತ್ರೈಲೋಕದಲ್ಲಿ ಹೆಸರು ಪಡೆ! ವಿದ್ಯಾಸಂಪನ್ನನಾಗು! ನಿನ್ನ ಗುರುಭಕ್ತಿಗ ಮೆಚ್ಚಿದ ಶುಕ್ರಾಚಾರ್ಯನ ವರದ ಹಸ್ತವು ಯಾವಾಗಲೂ ನಿನ್ನ ತಲೆಯಮೇಲೆ ಸತ್ತಿಗೆಯಾಗಿ ಉಳಿದೀತು.

**ದೇವಯಾನಿ**

—ಕಚದೇವಾ, ಆಕಾಶದಿಂದ ಪುಷ್ಪವೃಷ್ಟಿಯಾಗುತ್ತಿದೆ. (ಕಚನು ಎದ್ದು ಹೊರಡಲನುವಾಗುವನು-) ತಡೆಯಿರಿ! ನಿಮ್ಮ ಜೊತೆಯಲ್ಲಿ ನಾನೂ ಬರುವೆನು.

**ಕಚ**

—ಅಕ್ಕಾಜಿ, ನನ್ನ ಜೊತೆಯಲ್ಲಿ ಏಕೆ ಬರುವಿರಿ?

**ದೇವಯಾನಿ**

—ಕಚದೇವಾ, ಕಚದೇವಾ ...ಇಂದು ಹೀಗೇಕೆ ವಿಚಿತ್ರನಾಗಿ ಮಾತಾಡುತ್ತಿರುವಿರಿ? ಅಕ್ಕಾಜಿ... ಅಕ್ಕಾಜಿ.... ಎಂದು ಕರೆಯ ದೆಯೆ ಮೊದಲಿನಂತೆ ಕರೆಯಿರಿ! ಕಚದೇವಾ... ಇದೆಲ್ಲವೂ ಇಂದ್ರದೇವರು ಸಂಜೀವಿನಿ ವಿದ್ಯೆಯನ್ನು ಸಂಪಾದಿಸುವದಕ್ಕಾಗಿ ರಚಿಸಿದ ಕಪಟನಾಟಕವೆಂಬುದನ್ನು ನೀವು ಅರಿತಿರುವಿರಿ. ದೇವೇಂದ್ರನು ರಚಿಸಿರುವ ನಾಟಕದಲ್ಲಿಯ ನಾಟಕದಲ್ಲಿ ನಾವು ಒಡಹುಟ್ಟಿದವರು ನಾಟಕವಂತೂ ಮುಗಿದು ಹೋಗಿರುವದು. ಆದ್ದರಿಂದ ನಾವು ಮೊದಲಿನ ಪಾತ್ರಗಳನ್ನು ಪರಿಧಾರಣ ಮಾಡಲು ಅಡ್ಡಿ

ಯೇ ನಿರುವದು. ಮೇಲಾಗಿ ಸಂಜೀವಿನಿ—ವಿದ್ಯೆಯೂ ನಿಮ್ಮ ಹಸ್ತಗತವಾಗಿರುವದು. ಮೊದಲಿನಂತೆಯೆ ನೀವು ನನ್ನನ್ನು ತಿಳಿಯಿರಿ.

ಕಚ

—ಹೀಗೆ ಮಾತಾಡಬೇಡಿರೆಂದು ನಿಮಗೆಷ್ಟು ಸಾರೆಹೇಳಲಿ?

ದೇವಯಾನಿ

—ಕಚದೇವಾ....ನಿನ್ನನ್ನು ಚನ್ನಾಗಿ ಈಗ ಅರಿತೆ! ನಿನ್ನ ಪಾದ ದಲ್ಲಿ ನನ್ನ ಸರ್ವಸ್ವವನ್ನು ಅರ್ಪಿಸಿದೆನು. ಆದರೆ ಅದರ ಬೆಲೆ ನಿನಗಿಲ್ಲವದಿಲ್ಲ. ನೀನು ನನ್ನ ಪ್ರೇಮದ ಅವಮಾನವನ್ನು ಮಾಡಿದೆ! ನನ್ನ ಪವಿತ್ರವಾದ-ಶುದ್ಧವಾದ ಮನಸ್ಸನ್ನು ಪಾಪ ಮಾರ್ಗಕ್ಕೆ ಎಳೆಸಿದೆ. ಇದುವರೆಗೆ ನಿನ್ನ—ತಂದೆಯವ ರನ್ನಷ್ಟೇ ಅಲ್ಲ—ದೇವೇಂದ್ರನನ್ನು ಕೂಡ ಲೆಕ್ಕಿಸದಂಥ ನನ್ನ ತಂದೆಯವರು ನಿನ್ನ ಸಲುವಾಗಿ ಕೆಳಮೋರೆಯನ್ನು ಹಾಕುವ ಪ್ರಸಂಗವು ಬಂದೊದಗಿತು ಅವರ ಅಪಮಾನಕ್ಕೆ ಅನರ್ಥಕ್ಕೆ, ಮತ್ತು ನಾಶಕ್ಕೆ ನೀನು ಕಾರಣೀಭೂತನಾದೆ

ಕಚ

—ಅಕ್ಕಾಜಿ ...ಕೋಪಗೊಳ್ಳಬೇಡಿ, ಶಾಂತರಾಗಿರಿ

ದೇವಯಾನಿ

—ಯಾರು ನಿನ್ನ ಅಕ್ಕಾಜಿ? ನಾನು? ಇದುವರೆಗೆ ಪ್ರೇಮದ ನಟನೆಯನ್ನು-ಮಾಡಿ ವಂಚಿಸಿದೆ ಇನ್ನುಮುಂದೆ ಅಕ್ಕಾಜಿ ಯೆಂದು ಕರೆದು, ಮತ್ತಾವ ಸಂಕಟದಲ್ಲಿ ನನ್ನನ್ನು ನೂಕುವ ದನ್ನು ನೀನು ನಿಶ್ಚಯಿಸಿರುವಿ? ನಾಚಿಕೆಯಾಗುವದಿಲ್ಲವೆ ಅಕ್ಕಾಜಿಯೆಂದು ಕರೆಯಲು ...?

ಕಚ

—ಅಕ್ಕಾಜಿ....

ದೇವಯಾನಿ

—ಹಸುಗೂಸುಗಳು ಮಾಡುವಂತೆ ನೀವು ಮಾಡುತ್ತಿರುವಿರಿ! ಆಡಿದ್ದನ್ನೇ ತಿರುಗಿ—ತಿರುಗಿ ಬಡಬಡಿಸಬೇಡಿರಿ! ಇನ್ನು ಮುಂದೆ ನೀವು ಒಂದು ಶಬ್ದವನ್ನು ಕೂಡ ಆಡಬೇಡಿರಿ! ಅಕ್ಕಾಜಿಯೆಂದು ನುಡಿಯುವ ನಿಮ್ಮ .ನಾಲಿಗೆಯೇಕೆ ಕಳಚಿ ಬೀಳುವದಿಲ್ಲ. ನಿಮ್ಮ ಕಪ್ಪಾದ ಮುಖವನ್ನು ನನಗೆ ತೋರಿಸ ಬೇಡಿರಿ..! ಹೊರಟು ಹೋಗಿರಿ ಇಲ್ಲಿಂದ....!

ಕಚ

—ನೀನು ನನ್ನನ್ನು ಹೀಯಾಳಿಸು! ನಿಂದಿಸು! ಶಪಿಸು! ತಿರಸ್ಕರಿಸು....! ಆದರೆ ನಿನ್ನ ಕೈಯನ್ನು ನಾನೆಂದಿಗೂ ಹಿಡಿಯುಲಿಕ್ಕಿಲ್ಲ.

ದೇವಯಾನಿ

—ಕೈಯೇಕೆ ಹಿಡಿದೀರಿ? ಮದುವೆಯನ್ನೇಕೆ ಮಾಡಿಕೊಂಡೀರಿ? ಸಾಧಿಸಬೇಕಾದ ಸ್ವಾರ್ಥವು ಸಾಧಿಸಿ ಆಗಿದೆಯಲ್ಲವೆ ಈಗ! ಕಾರ್ಯ ಸಾಧನೆಯ ಕಾಳ ಪುರುಷ ನೀನು! ಕಚನೆ....ನೀನು ಪ್ರಾಮಾಣಿಕನಿದ್ದರೆ ಇದನ್ನು ಮೊದಲೇ ನನಗೆ ಹೇಳಲಿಲ್ಲವೇಕೆ? ಕಾರ್ಯಸಾಧನೆಯ ನಂತರವೆ ಹೇಳಿದಿಯಲ್ಲವೆ? ಕಾರ್ಯಸಾಧನೆಯ ಕಾಳ ಪುರುಷ ನೀನು! ಕಾರ್ಯವನ್ನು ಸಾಧಿಸಿದ ಸ್ವಾರ್ಥಿಯೆಂದು ನಾನೇಕೆ ಕರೆಯಬಾರದು ಕಚನೆ ಕಿವಿಗೊಟ್ಟುಕೇಳು ನೀನು ಸಂಜೀವಿನಿ ವಿದ್ಯೆಹರಣಮಾಡುದುದಲ್ಲದೆ ನನ್ನ ತಂದೆಯುವರ ಮತ್ತು ನನ್ನ ಹರಣವನ್ನೂ ಮಾಡಿರುವೆ! ವೈರವನ್ನು ಸಾಧಿಸುವದಕ್ಕಾಗಿ ಪ್ರೇಮದ ನಟನೆಯನ್ನು ಮಾಡಿ ನನ್ನ, ಅಪ್ಪಾಜಿಯವರ ಮತ್ತು ಅನುಯಾಯಿಗಳ ನಾಶವನ್ನು ಮಾಡಿದೆ! ಸವಿಯಾದ

ಮಾತುಗಳನ್ನಾಡಿ ನನ್ನನ್ನು ವಂಚಿಸಿದೆ! ಮದುವೆಯ ವಚನ ವನ್ನಿತ್ತು ವಚನಭ್ರಷ್ಟನಾದೆ....!

**ಕಚ**

— ನಾನು ಮದುವೆಯ ವಚನವನ್ನು ಕೊಟ್ಟಿಲ್ಲ....!

**ದೇವಯಾನಿ**

— ನಿನ್ನ ಮನಸ್ಸಿಗೆ ಅದು ಗೊತ್ತಿರುವದು. ಶಬ್ದಗಳ ವಚನಕ್ಕೆ ನೀನು ಬೆಲೆಯನ್ನು ಕೊಡುವುದಿಲ್ಲ. ಸಂಜೀವಿನಿ ವಿದ್ಯೆಯನ್ನು ಹತ್ತಿದ ನೀನು ಹಡೆದ ತಂದೆಯ ಹೆಸರನ್ನು ಹೇಳುವದನ್ನು ಬಿಟ್ಟು, ಎರಡನೆಯ ತಂದೆಯ ಹೆಸರನ್ನು ಹೇಳಿದೆ. ಆದ್ದರಿಂದ ಕಚನೆ, ನಿನ್ನನ್ನು ಪಿತೃದ್ರೋಹಿಯೆಂದು ನಾನೇಕೆ ಕರೆಯಬಾರದು. ಇದರಿಂದ ನಮಗಿಂತ ದೇವೇಂದ್ರ, ಬೃಹಸ್ಪತಿಯನರ ಅಧಃಪತನವೇ ಹೆಚ್ಚಾಗಿರುವದು.

**ಕಚ**

—ಸಿಟ್ಟಿನ ಭರದಲ್ಲಿ ಬಾಯಿಗೆ ಬಂದಂತೆ ಬಡಬಡಿಸಬೇಡ....

**ದೇವಯಾನಿ**

—ನಾನು ಬಡಬಡಿಸುತ್ತಿರುವೆನೆ? (ದೈನ್ಯದಿಂದ) ಕಚದೇವಾ ವಿಚಾರ ಮಾಡಿರಿ, ಒಮ್ಮೆಲೆ ಒಂದು ನಿರ್ಧಾರಕ್ಕೆ ಬರಬೇಡಿರಿ ನಿಮ್ಮ ಹೊರ್ತಾಗಿ ನನಗೆ ಯಾರಿದ್ದಾರೆ?

**ಕಚ**

—ನಿಮ್ಮ ತಂದೆಯವರಿದ್ದಾರೆ! ನಿಮ್ಮ ಅನುಯಾಯಿಗಳಿದ್ದಾರೆ!

**ದೇವಯಾನಿ**

—ಇದ್ದಾರೆ....! ಆದರೆ ಕಚದೇವ.... ನೀವು ನನ್ನನ್ನು ದೂರ ನೂಕಬೇಡಿರಿ! ನಿಮ್ಮ ಸಲುವಾಗಿ ಎಲ್ಲಿದರ ಮೇಲೆ ಧಾರೆಯ

ರೆಮು ನಾನು ನಿಂತಿಪ್ಪೇನೆ. (ಅಳುತ್ತ) ಹೇಳಿರಿ ... ಇದರ ಬೆಲೆ ನಿಮಗಿರುವದಿಲ್ಲವೆ? ನಿಮಗೆ ಕರುಣೆ ಬರುವದಿಲ್ಲವೆ?

ಕಚ

—ಸುಮ್ಮನೆ ಅತ್ತು ಪ್ರಯೋಜನವಾದರೂ ಏನಿರುವದು? ಅಕ್ಕಾಜೀ....

ದೇವಯಾನಿ

--ಇನ್ನು ಮುಂದೆ ಅಕ್ಕಾಜಿಯೆಂದು ನನ್ನನ್ನು ಕರೆಯಬೇಡಿರಿ! ಕರೆಯಕೂಡದು! ವಿಚಾರಮಾಡಿ ನೋಡಿರಿ – ಇದುವರೆಗೆ ಗುರುಗಳಾಗಿದ್ದವರು ಈಗ ಹಡೆದತಂದೆ ಹೇಗಾಗುವರು? ಇದೆಂತಹ ಹೀನ ಮನಸ್ಸು ನಿಮ್ಮದು?

ಕಚ

– ದೇವಯಾನಿ, ಎಷ್ಟಾದರೂ ಆಜ್ಞೆಯನ್ನು ಪಾಲಿಸುವ ಜೀವ ನನ್ನದು ! ಆಜ್ಞೆಯನ್ನು ಪಾಲಿಸುವದೊಂದೇ ಗೊತ್ತು ನನಗೆ ...! ಹೇಳಿದ ಸಂಗತಿಯನ್ನು ಮಾಡುವದನ್ನು ಬಿಟ್ಟು ಮತ್ತಾವ ಸಂಗತಿಯನ್ನು ನಾನು ಮಾಡುವದಿಲ್ಲ. ದೇವಯಾನಿ... ಪ್ರೇಮಕಿಂತಲು ಕರ್ತವ್ಯವು ಶ್ರೇಷ್ಠವಿರುವದು.

ದೇವಯಾನಿ

—ಹೌದು ! ಕಚದೇವಾ ಹೌದು ! ಆದರೆ ಕರ್ತವ್ಯದ ಉಗಮಸ್ಥಾನವು ಪ್ರೇಮವಿರುವದು. ಆದ್ದರಿಂದ ಪ್ರೇಮಕ್ಕೆ ಹೆಚ್ಚು ಪ್ರಾಧಾನ್ಯ....! ನಿಮ್ಮ ಸಲುವಾಗಿ ನಾನು ನನ್ನ ತಂದೆಯವರನ್ನು ಲೆಕ್ಕಿಸಲಿಲ್ಲ....! ಅವರ ಉತ್ಕರ್ಷ—ಅಪಕರ್ಷಗಳ ಕಡೆಗೆ ಲಕ್ಷವನ್ನು ಕೊಡಲಿಲ್ಲ....! ಅವರು ತಮ್ಮ ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಅವರ ಅನುಯಾಯಿಗಳ ಕಡೆಗೆ ನಾನು ಲಕ್ಷವೀಯಲಿಲ್ಲ....! ಅವರನ್ನು ನಾನು ಗಮನಿಸಲಿಲ್ಲ!

ಇಷ್ಟೆಲ್ಲವನ್ನು ನಾನು ನಿಮ್ಮ ಸಲುವಾಗಿ ಮಾಡಿದೆ! ( ನಿರಾಶೆಯಿಂದ ) ಆದರೆ ನಿಮಗೆ ನನ್ನ ಪ್ರೇಮದ ಬೆಲೆಯಿಲ್ಲ! ನನ್ನ ತ್ಯಾಗದ ಕಲ್ಪನೆಯಿಲ್ಲ! [ರೋಷದಿಂದ] ಆದರೆ ಕಚನೇ ನೀನು ಭಿಕ್ಷುಕರಂತೆ ಸಂಜೀವಿನಿ ವಿದ್ಯೆಯ ಭಿಕ್ಷೆಯನ್ನು ತಂದೆಯವರ ಬಳಿಯಲ್ಲಿ ಬೇಡಿದ್ದರೆ ಅದೃಷ್ಟವಶಾತ್ ತಂದೆಯವರು ಕೊಡುವದಕ್ಕೆ ಒಪ್ಪದಿದ್ದರೂ ನಾನು ಅವರಿಂದ ನಿನಗೆ ಭಿಕ್ಷೆಯೆಂದು ಕೊಡಿಸುತ್ತಿದ್ದೆ. ಮತ್ತು ನೀನೊಡ್ಡಿದ ಜೋಳಿಗೆಯಲ್ಲಿ ನನ್ನ ಕೈಯಿಂದ ಸಂಜೀವಿನಿ ವಿದ್ಯೆಯ ಭಿಕ್ಷೆಯನ್ನು ನೀನೊಡ್ಡಿದ ಜೋಳಿಗೆಯಲ್ಲಿ ಹಾಕುತ್ತಿದ್ದೆ.

ಕಚ

—ಅಕ್ಕಾಜಿ. ..ನಿನಗೆ ಬೇಕಾದ್ದನ್ನು ......ಆಡುವದಕ್ಕೆ ಅಧಿಕಾರವಿದೆ !

ದೇವಯಾನಿ

—ಅಧಿಕಾರದಿಂದ ಕೂಡಿ, ಯಾವ ಮಾತನ್ನು ನಾನು ಆಡುತ್ತಿರುವದಿಲ್ಲ.

ಕಚ

—ಹಿಂದಿನದು ಹಿಂದೆ ಆಗಿ ಹೋಯಿತು ನಾನೆಂದಿಗೂ ನಿನ್ನ ಜೊತೆಯಲ್ಲಿ ಮದುವೆಯಾಗುವೆನೆಂದು ವಚನಬದ್ಧನಾಗಿಲ್ಲ.

ದೇವಯಾನಿ

—ಕಚನೆ—ನಿನ್ನನ್ನು ಸಂಪೂರ್ಣವಾಗಿ ನಾನೀಗ ಬಲ್ಲೆ....! ಇನ್ನು ಮುಂದೆ ನಾನೆಂದಿಗೂ ನಿನ್ನ ಸವಿಮಾತುಗಳಿಗೆ ಮೋಸ ಹೋಗಲಿಕ್ಕಿಲ್ಲ ! ಈಗ ನಾನು ನಿನ್ನ ಅಕ್ಕಾಜಿಯಾಗಿದ್ದೇನೆ. ಸ್ವಾರ್ಥವನ್ನು ಸಾಧಿಸಲು ಹೊರಟ ನೀನು ಸ್ವಲ್ಪ ಸಮಯದಲ್ಲಿ ಅಮ್ಮಾಜಿಯೆಂದು ಕೂಡ ಕರೆಯಬಹುದು. ನಿರ್ಲಜ್ಜ

ನೀವು ನೀನು ಅಪ್ಪಾಜಿಯೆಂದು ಕೂಡ ಕರೆಯಲಿಕ್ಕೆ ಹಿಂದೆ ಮುಂದೆ ನೋಡಲಿಕ್ಕಿಲ್ಲ...!

**ಕಚ**

—ಅಕ್ಕಾಜಿ....ನನ್ನ ಶಬ್ದದಲ್ಲಿ ಬದಲು ಮಾಡಲು ನಾನು ಸಿದ್ಧನಿಲ್ಲ ನಿನ್ನೊಡನೆ ಮದುವೆ ಯಾಗುವದಿಲ್ಲೆಂದು ಎಷ್ಟು ಸಾರೆ ಹೇಳಲಿ ?

**ದೇವಯಾನಿ**

—ಕಚದೇವಾ....ಕಚದೇವಾ ನನ್ನೀ ಪರಿಸ್ಥಿತಿಯನ್ನು ಕಂಡು ನಿಮಗೆ ಕರುಣೆ ಬರುವುದಿಲ್ಲವೆ? ನಿಮ್ಮ ಹೃದಯಕ್ಕೆ ಚುರುಕು ತಟ್ಟುವುದಿಲ್ಲವೆ? (ಕಾಲುಗಳನ್ನು ಹಿಡಿದು) ಮದುವೆಯನ್ನು ಮಾಡಿಕೊಳ್ಳದಿದ್ದರೂ ನಿಮ್ಮ ಚರಣದ ದಾಸಿಯೆಂದಾದರೂ ನಿಮ್ಮ ಪಾದದ ಒಳಿಯಲ್ಲಿ ನನಗೆ ಸ್ಥಳವನ್ನು ಕೊಡಿರಿ!

**ಕಚ**

— ಎಂದಿಗೂ ದೊರೆಯದು.

**ದೇವಯಾನಿ**

—( ತಿರಸ್ಕಾರದಿಂದ— ) ಚರಣದ ದಾಸಿಯೆಂದು ಕೂಡ ನೀವು ಸ್ಥಳವನ್ನು ಕೊಡುವದಕ್ಕೆ ಸಿದ್ಧರಿಲ್ಲವಲ್ಲವೆ ? ಇದು ವರೆಗೆ ಅಭಿಮಾನವೆ ಅಲಂಕಾರವೆಂದು ಭಾವಿಸಿದ ಶುಕ್ರಾಚಾರ್ಯನ ಮಗಳು ಇಷ್ಟೊಂದು ಹೀನಳಾಗಿ........ ದೀನಳಾಗಿ ಯಾರ ಮುಂದೆಯೂ ತಲೆಯನ್ನು ತಗ್ಗಿಸಿದ್ದಿಲ್ಲ....! ಯಾರ ಕಾಲುಗಳನ್ನು ಹಿಡಿದಿದ್ದಿಲ್ಲ... ...! ಆದರೆ ನಿಮ್ಮ ಮೇಲಿನ ಪ್ರೇಮಕ್ಕಾಗಿ ನಿಮ್ಮ ಕಾಲುಗಳನ್ನು ಹಿಡಿದಿದ್ದೇನೆ! ನಿಮ್ಮ ಚರಣದಾಸಿಯೆಂದು ಇರುವುದಕ್ಕೆ ಸಿದ್ಧಳಿದ್ದೇನೆ.

**ಕಚ**

— ಹುಚ್ಚಿಯಿರುವಿ ... ...

ದೇವಯಾನಿ

— ನಿನಗೆ ಗೊತ್ತಿರದಿದ್ದರೂ ನನಗೆ ಗೊತ್ತಿರುವದು. ನನ್ನನ್ನು ಹಾಳುಮಾಡುವ ನಿಮ್ಮ ಸಿಟ್ಟಿಯವು ಪೂರ್ತಿ ಆಯಿತಲ್ಲವೆ? ಆದರೆ ಕಚನೆ .. ..ಸಂಜೀವಿನಿ –ವಿದ್ಯೆಯು ಹೋದರೂ ನನ್ನ ತಂದೆಯವರು ಅಂಜುವುದಿಲ್ಲ. ಪುನಃ ತಪಶ್ಚರ್ಯ ವನ್ನು ಮಾಡಿ ಅದನ್ನು ಸಂಪಾದಿಸುವ ಸಾಮರ್ಥ್ಯವು ಅವ ರಲ್ಲಿರುವದು. ಇದು ದೇವೇಂದ್ರನಿಗೂ ಗೊತ್ತಿದೆ.

ಕಚ

—ಅವರ ಶಕ್ತಿಯ ವಿಷಯಕ್ಕೆ ನನಗೆ ವಿಶ್ವಾಸವಿದೆ.

ದೇವಯಾನಿ

—ನಿನಗಿಷ್ಟೇ ಏಕೆ ? ದೇವತೆಗಳ ಸಮೂಹವು ದೇವೇಂದ್ರ ಬೃಹಸ್ಪತ್ಯಾದಿಗಳನ್ನು ಒಳಗೊಂಡು ಅಪ್ಪಾಜಿಯ ಎದುರು ಮುಖತಗ್ಗಿಸಿ ನಿಲ್ಲುವದು(ಆಧೈರ್ಯದಿಂದ) ಆದರೆ ... ಆದರ... ನೀವು ನನ್ನನ್ನು ಹೊರಕ್ಕೆ ನೂಕದೆ ಜೊತೆಗೆ ಕರೆದುಕೊಂಡು ಹೋಗಿರಿ

ಕಚ

— ಮಾತಿಗೆ ಮಾತು ಬೆಳೆಯಿಸಿ ಪ್ರಯೋಜನವಾದರೂ ಏನಿ ರುವದು ? ಆದಷ್ಟು ಬೇಗ ನನಗೆ ದೇವಲೋಕಕ್ಕೆ ಹೋಗುವದಿದೆ.

ದೇವಯಾನಿ

—ನಡೆಯಿರಿ ! ನಡೆಯರಲ್ಲ ! ನಾನೂ ನಿಮ್ಮ ಜೊತೆಯಲ್ಲಿ ದೇವಲೋಕಕ್ಕೆ ಬರುವೆನು. ಹೀಗೇಕೆ ತಡೆದು ನಿಂತಿರಿ ? ನಡೆಯಿರಿ.

ಕಚ

—ನನ್ನ ಜೊತೆಯಲ್ಲಿ ನೀನು ಬರಕೂಡದು !

ದೇವಯಾನಿ

ಅದೇಕೆ ?

ಕಚ

— ದೇವಾಧಿದೇವನಾದ ದೇವೇಂದ್ರನ ಆಜ್ಞೆಯಿದೆ .... !

ದೇವಯಾನಿ

—( ಸಿಟ್ಟಿನಿಂದ— ) ದೇವೇಂದ್ರನ ಆಜ್ಞೆ....! ಸಂಜೀವಿನಿ ವಿದ್ಯೆಯನ್ನು ಸಂಪಾದಿಸುವದೇ ದೇವೇಂದ್ರನ ಆಜ್ಞೆಯಿತ್ತಲ್ಲವೆ ? ( ಮೆಲ್ಲಗಿನ ದನಿಯಲ್ಲಿ ) ಆದರೆ ......ನನ್ನ ಜೊತೆಯಲ್ಲಿ ಮದುವೆಯನ್ನು ಮಾಡಿ ಕೊಳ್ಳಕೂಡದೆಂದು—ದೇವೇಂದ್ರನ ಆಜ್ಞೆಯಿಲ್ಲವಲ್ಲವೆ ? ದೇವೇಂದ್ರರು ಹಾಗೆ ಆಜ್ಞೆಯನ್ನು ಕೊಡುವುದೂ ಶಕ್ಯವಿಲ್ಲ.

ಕಚ

— ಇಲ್ಲ........ !

ದೇವಯಾನಿ

— ಇಲ್ಲವಲ್ಲವೆ ? ಹಾಗಾದರೆ ನನ್ನ ಜೊತೆಯಲ್ಲಿ ಮದುವೆಯನ್ನು ಮಾಡಿ ಕೊಳ್ಳಲು ನಿಮಗೆ ಅಡ್ಡಿಯೇನಿರುವದು? ಮಾಡಿ ಕೊಳ್ಳುವಿರಲ್ಲವೆ ?

ಕಚ

—( ಅಂಜಿದ ಸ್ವರದಲ್ಲಿ ) ದೇವಯಾನಿ....ದೇವಯಾನಿ........ ದೂರಸರಿ ! ದೂರಸರಿ ! ನನ್ನ ಶರೀರವನ್ನು ಮುಟ್ಟಬೇಡ.

ದೇವಯಾನಿ

—ಅದೇಕೆ ? ದೇವೇಂದ್ರರು ನಮ್ಮ ಮದುವೆಗೆ ವಿರುದ್ಧರಿಲ್ಲರಲ್ಲವೆ ?

ಕಚ

—ಅವರು ವಿರುದ್ಧರಾಗಿರದಿದ್ದರೂ ...ಅವರ ಅಂಜಿಕೆಯಿದೆ ನನಗೆ........! ನಾನು ನಿನ್ನ ಜೊತೆಯಲ್ಲಿ ಮದುವೆಯನ್ನು

ಮಾಡಿಕೊಂಡರೆ ದೇವತೆಗಳಿಗೇನೆನಿಸೀತು ? ದೇವೇಂದ್ರನಿಗೆ ಏನೆನಿಸೀತು ? ( ಹೊರಡುವನು )

**ದೇವಯಾನಿ**

—( ಅಳುತ್ತ— ) ಕಚದೇವಾ....ಹೋಗ ಬೇಡಿರಿ ! ನಿಮ್ಮ ಕಾಲಿಗೆರಗುವೆ...! ನನ್ನನ್ನು ಬಿಟ್ಟು ಹೋಗ ಬೇಡಿರಿ ನಿಮ್ಮನ್ನಗಲಿ ಒಂದು ಕ್ಷಣಕೂಡ ನಾನು ಇರಲಾರೆ !

**ಕಚ**

—ನನ್ನ ಜೊತೆಯಲ್ಲಿ ನಿನ್ನನ್ನು ಕರೆದುಕೊಂಡು ಹೋಗುವದಿಲ್ಲವೆಂದು ಎಷ್ಟು ಸಾರೆ ಹೇಳಲಿ? ದೂರಸರಿ ! ಸರಿ ದೂರ........!

**ದೇವಯಾನಿ**

—ನಿಷ್ಠುರ ! ಪಾಷಾಣ ಹೃದಯಿ ! ಸ್ತ್ರೀಯರ ಹೃದಯವನ್ನು ಅರಿಯದ ಮಂದಮತಿ ! ಅರಸಿಕ ! ಇಷ್ಟೊಂದು ಅಂಗಲಾಚಿ ಬೇಡಿಕೊಂಡರೂ ನಿನಗೆ ಕರುಣೆ ಬರುವುದಿಲ್ಲವಲ್ಲವೆ ? (ಕಚನ ಸನಿಯಕ್ಕೆ ಹೋಗವಳು)

**ಕಚ**

—ದೂರಸರಿ! ನನ್ನನ್ನು ಮುಟ್ಟುವದಕ್ಕೆ ನಿನಗೆ ನಾಚಿಕೆಯಾಗುವದಿಲ್ಲವೆ? ನಿನ್ನನ್ನು ಕರೆದುಕೊಂಡು ಹೋಗುವುದಿಲ್ಲ.

**ದೇವಯಾನಿ**

—( ಕಾಲುಹಿಡಿದು— ) ಕಚದೇವಾ....ಇಲ್ಲೆನ್ನಬೇಡಿರಿ!

**ಕಚ**

—ಇಲ್ಲ........! ( ಒದೆಯುವನು )

**ದೇವಯಾನಿ**

—( ಕ್ರೋಧದಿಂದ— )ಕಚ ..! ಕಾಲುಹಿಡಿದವಳನ್ನು ಕತ್ತೆಯಂತೆ ಒದ್ದೆನೀನು ! ಧೂ ಪಾಪಿ !

**ಕಚ**

-ಅಕ್ಕಾಜಿ.

**ದೇವಯಾನಿ**

— ಕಚನೆ ..ಲಕ್ಷ್ಯಗೊಟ್ಟು ಕೇಳು—ಎಂಟು ದಿಕ್ಪಾಲಕರ ಸಾಕ್ಷಿಯಾಗಿ, ಸಾಧು ಸತ್ಪುರುಷರ ಸಾಕ್ಷಿಯಾಗಿ, ದಾನವ ದೇವರ ಸಾಕ್ಷಿಯಾಗಿ ಸಪ್ತಲೋಕಗಳಿಗೆ ಕೇಳಿಸುವಂತೆ ಈ ದೇವಯಾನಿಯು ನಿನಗೆ ಶಾಪವನ್ನು ಕೊಡುತ್ತಿದ್ದಾಳೆ.

**ಕಚ**

-- ದೇವಯಾನಿ ...!

**ದೇವಯಾನಿ**

—ಎಲೈ ಕಚನೆ...ದೇವೇಂದ್ರ,ಬೃಹಸ್ಪತಿ ಮತ್ತು ನೀನು ಕೂಡಿಕೊಂಡು ಕೃಷ್ಣಕಾರಸ್ಥಾನ ರಚಿಸಿ, ಕಳ್ಳತನದಿಂದ ಸಂಪಾದಿಸಿದ ಈ ಸಂಜೀವಿನಿ ವಿದ್ಯೆಯ ಉಪಯೋಗವು ಯೋಗ್ಯ ವೇಳೆಯಲ್ಲಿ ನಿಮಗೆಂದಿಗೂ ಆಗಲಿಕ್ಕಿಲ್ಲ! ಹೋಗು.... ಹೋಗು .ದೇವಲೋಕಕ್ಕೆ ಹೋಗು, ದೇವೇಂದ್ರಾದಿಗಳಿಗೆ ಹೇಳು! ಅವರಲ್ಲಿ ನನ್ನ ಶಾಪವನ್ನು ಎದುರಿಸುವ ಶಕ್ತಿಯಿರುವದೇ ಎಂದುಕೇಳು! ಹೋಗು ಇಲ್ಲಿಂದ....!ನನ್ನ ಎದುರಿನಲ್ಲಿ ನಿಲ್ಲಬೇಡ!

**ಕಚ**

— ಅಕ್ಕಾಜಿ .. ದೇವಯಾನಿ....

**ದೇವಯಾನಿ**

— ದೂರ ಸರಿ. ನೀನು ದೇವತೆಯಲ್ಲ. ದಾನವ! ಪಶು!

**ಕಚ**

—ಗುರುಪುತ್ರಿ, ದೇವತೆಗಳ ಗುರುವಾದ ಬೃಹಸ್ಪತಿಯ ಮಗ, ಕಚನೂ ನಿನಗೆ ಶಾಪವನ್ನು ಕೊಡುತ್ತಾನೆ. ನಿನ್ನ ಮದುವೆಯು ಬ್ರಾಹ್ಮಣ ಕುಮಾರನ ಜೊತೆಯಲ್ಲಿ ಎಂದಿಗೂ ಆಗದು!

**ದೇವಯಾನಿ**

— ಕಚ...(ವಿಕಟಹಾಸ್ಯ) ಅಪ್ಪಾಜಿ.... (ನಗುವಳು)

**ಕಚ**

—ದೇವಯಾನಿ....ಹೀಗೇಕೆ ನಗುವಿ? ಏನಾಯಿತು?

ದೇವಯಾನಿ

—ಯಾರು ನೀನು? ನನ್ನನ್ನು ಮುಟ್ಟಬೇಡ ..! ದೂರ ಸರಿ! ನೀನು ನನ್ನ ಕಚದೇವರಲ್ಲ! ನನ್ನ ಕಚದೇವರು ಈ ಮೊದಲಿ (ಅಳುವಳು)

ಕಚ

--ದೇವಯಾನಿ... ದೇವಯಾನಿ ನಾನು ಕಚನಿದ್ದೇನೆ. ಅಳ ಬೇಡ ...!

ದೇವಯಾನಿ

—(ಕೋಪದಿಂದ) ನೀನು ಕಚನೆ .. ?

ಕಚ

—ಹೌದು ನಾನು ಕಚ

ದೇವಯಾನಿ

—ಕಚ...ಕಚ...ನಮ್ಮ ಶತ್ರು! ನಮ್ಮ ಕುಲವನ್ನು ಹಾಳು ಮಾಡುವದಕ್ಕೆಂದು ಹೊರಟ ದಾನವ! ಇಲ್ಲಿಂದ ಮೊದಲು ದೇವಲೋಕಕ್ಕೆ ಹೋಗ! ನಿನ್ನ ಶಾಪಗ್ರಸ್ತಮುಖವನ್ನು ನನಗೆ...ತೋರಿಸಬೇಡ! (ಮೈ ಮೇಲೆ ಏರಿಹೋಗಿ) ಹೋಗು ವಿಯೋ ಇಲ್ಲವೊ? ನಿನ್ನ ಕಪ್ಪಾದ ಮುಖವನ್ನು ದೇವೇಂದ್ರ ಬೃಹಸ್ಪತಿಯಾದಿಗಳಿಗೆ ತೋರಿಸು! ಹೋಗು... ನನ್ನ ಎದುರಿ ನಲ್ಲಿ ನಿಲ್ಲಬೇಡ! (ಕಚ ಹೋಗುವನು) ಕಚ ಕಚ ಹೋದೆ ಯಾ? ಏನಾಯಿತು ನನ್ನ ಪರಿಸ್ಥಿತಿ? (ಹಣೆಗೆ ಕೈ ಹಚ್ಚಿ) ದೇವಾ ....ನಿಜವಾದ ಪ್ರೇಮದ ಪರಿಸ್ಥಿತಿಯು ಹೀಗಾಗುವದೇ ಈ ಪ್ರಪಂಚದಲ್ಲಿ ? ನನ್ನದೇನು ಉಳಿಯಿತು? ಕಚದೇವಾ ಕಚದೇವಾ ಪರಮ ಪವಿತ್ರವಾದ ಪ್ರೇಮದ ಪರಿಸಮಾಪ್ತಿಯು ಹೀಗೆಯೆ ಆಗುವದೇನು ಈ ಪ್ರಪಂಚದಲ್ಲಿ....? (ಕುಸಿದು ಬೀಳುವಳು.)

**ಶಾಂತಿಃ ಶಾಂತಿಃ ಶಾಂತಿಃ!**

# ರತ್ನಾ ಶಾಸ್ತ್ರಿಯವರು

ಸ್ವಯಂ ಪ್ರತಿಭೆಯಿಂದ ಕೂಡಿದ ಲೇಖಕರು. ಕಳೆದ ಹತ್ತು
ಹನ್ನೆರಡು ವರ್ಷಗಳಿಂದ ಕನ್ನಡ ನಾಡಿನ ನಾಲ್ವತ್ತು ಪತ್ರಿಕೆ
ಗಳಲ್ಲಿ ನೂರಕ್ಕಿಂತಲು ಹೆಚ್ಚಾಗಿ ಕತೆಗಳನ್ನು ಬರೆದಿದ್ದಾರೆ.
ನೂರರಷ್ಟು ರೂಪಕಕತೆಗಳನ್ನು ಬರೆದಿದ್ದಾರೆ. ಇದಲ್ಲದೆ
ಕವಿತೆ, ಲಲಿತಪ್ರಬಂಧ, ನಾಟ್ಯಘಟ, ಹರಟೆ,
ಶಬ್ದಚಿತ್ರ ಮತ್ತು ಹಾಸ್ಯಘಟ ಮೊದಲಾ
ದವುಗಳನ್ನು ಬರೆದು ತಮ್ಮ ಪ್ರತಿಭೆ
ಯನ್ನು ಸೂರೆಸೂರೆಯಾಗಿ
ಮಾಡಿದ್ದಾರೆ.

ರತ್ನಾ ಶಾಸ್ತ್ರಿಯವರು ಬರೆಯದ ಪತ್ರಿಕೆಯಿಲ್ಲ! ಅವರ ಲೇಖನ
ಗಳನ್ನೋದದ ಕನ್ನಡಿಗನಿಲ್ಲ! ಎಂದು ಹೇಳಿದರೆ ಅತಿಶಯೋಕ್ತಿ
ಯಾಗದು. ಇವರು ಬರೆದ ಸಾಹಿತ್ಯವನ್ನು ಪುಸ್ತಕರೂಪ
ವಾಗಿ ಪ್ರಕಟಿಸುವದೇ ಕೌಸ್ತುಭ ಪ್ರಕಾಶನದ
ಧ್ಯೇಯ. ವಾಚಕರು ಮತ್ತು ವ್ಯಾಪಾರಿ
ಗಳು ಸಹಕರಿಸುವಿರಾಗಿ
ನಂಬಿದ್ದೇವೆ.

ಪ್ರಕಾಶಕರು:
ಕೌಸ್ತುಭ ಪ್ರಕಾಶನ, ಬೆಳಗಾಂವಿ.

---